ವಾಸುದೇವ ಸಾಹಿತ್ಯರತ್ನಮಾಲೆ—೧

# ನಲ-ದಮಯಂತಿ

(ಐದಂಕಿನ ಪೌರಾಣಿಕ ಸಂಗೀತಪ್ರಧಾನ ನಾಟಕ)

ಬರೆದವರು:

**ಕೆರೂರ ವಾಸುದೇವಾಚಾರ್ಯರು**

(ಮೊದಲನೆಯ ಮುದ್ರಣ ೧೦೦೦ ಪ್ರತಿಗಳು.)

ವಾಸುದೇವ ಸಾಹಿತ್ಯರತ್ನಮಾಲೆ

**ಬಾಗಿಲಕೋಟೆ**

೧೯೪೫ **ಸಮಾಜ-ಪುಸ್ತಕಾಲಯ,** ಬೆಲೆ: ೧-೮-೦

**ಧಾರವಾಡ.**

# ಪ್ರಕಾಶಕರ ಮಾತು

ನಾನು ಶ್ರೀಮಾನ್ ಜಿ. ಬಿ. ಜೋಶಿಯವರ ಸಹಾಯದಿಂದ ದಿವಂಗತ ಕೆರೂರ ವಾಸುದೇವಾಚಾರ್ಯರು ಬರೆದ ಸಾಹಿತ್ಯವನ್ನು ಒಂದು ಕ್ರಮಬದ್ಧವಾದ ರೀತಿಯಲ್ಲಿ ಪುಸ್ತಕರೂಪವಾಗಿ ಇದೇ ಒಂದೆರಡು ವರ್ಷಗಳಲ್ಲಿ ಪ್ರಕಟಿಸಬೇಕೆಂದೆಣಿಸಿ ಈ ವಾಸುದೇವ ಸಾಹಿತ್ಯರತ್ನಮಾಲೆಯನ್ನು ಪ್ರಾರಂಭಿಸಿದ್ದೇನೆ. ನಲ-ದಮಯಂತೀ ನಾಟಕವು ಮೊದಲನೆಯ ರತ್ನ.

ಈ ಸಾಹಿತ್ಯರತ್ನಮಾಲೆಯಲ್ಲಿ ದಿವಂಗತ ಕೆರೂರ ವಾಸುದೇವಾಚಾರ್ಯರ ಸಾಹಿತ್ಯವನ್ನು ನಾಟಕ, ಕಥೆ, ಕಾದಂಬರಿ, ಕವಿತೆಗಳು, ಲೇಖನಗಳು ಮುಂತಾದವುಗಳನ್ನು ಪ್ರಕಟಿಸಬೇಕೆಂದಿದ್ದೇನೆ, ಸಾಹಿತ್ಯಾಭಿಮಾನಿಗಳ ನೆರವು ದೊರೆತರೆ.

'ಸಚಿತ್ರಭಾರತ'ದ ಸಂಪುಟಗಳನ್ನು ಕೊಟ್ಟು ಈ ಗ್ರಂಥ ಪ್ರಕಟನೆಗೆ ಸಹಾಯ ಮಾಡಿದ ಹುಬ್ಬಳ್ಳಿಯ ಶ್ರೀ ಸರಸ್ವತಿ ವಿದ್ಯಾರಣ್ಯವಾಚನಾಲಯದ ಸಂಚಾಲಕರಿಗೂ ಶ್ರೀ ಮಂಗಳವೇಢೆ ಶ್ರೀನಿವಾಸರಾಯರಿಗೂ ನಾನು ಋಣಿಯಾಗಿದ್ದೇನೆ. ಇನ್ನೂ ಅನೇಕ ರೀತಿಯಲ್ಲಿ ಸಹಾಯ ಸಲಹೆಗಳನ್ನು ನೀಡಿದ ಮಹನೀಯರಿಗೂ ನಾನು ಕೃತಜ್ಞನಾಗಿದ್ದೇನೆ.

ನಲ-ದಮಯಂತೀ ನಾಟಕವನ್ನು ಸಂಪೂರ್ಣವಾಗಿ ರಂಗಭೂಮಿಯ ಮೇಲೆ ತಂದದ್ದಕ್ಕಾಗಿ ನಾನು ನಮ್ಮ 'ವಾಸುದೇವ ಅಮೆಚೂರ್ಸ'ದವರಿಗೆ ಅಭಿವಂದನೆಗಳನ್ನು ಸಲ್ಲಿಸದೆ ಇರಲಾರೆ.

ಹೊದಿಕೆಯ ಚಿತ್ರ ತೆಗೆದುಕೊಟ್ಟ ಶ್ರೀಮಾನ್ ರಾಘವೇಂದ್ರರಿಗೂ ನಾನು ಋಣಿಯಾಗಿದ್ದೇನೆ.

**ಸ್ವಾಮಿ. ರಾ. ಕೆರೂರ.**

# ಮುಂದಿನ ರತ್ನಗಳು

---

೧

ಭ್ರಾತೃಘಾತಕನಾದ

# ಔರಂಗಜೇಬ

ರೋಮಾಂಚಕಾರಿ ಐತಿಹಾಸಿಕ ಸ್ವತಂತ್ರ ಕಾದಂಬರಿ.

ಸುಮಾರು ೩೫೦ ಪುಟಗಳು !



೨

# ಯುವನ ಸೈರಂಧ್ರಿ

ಅದ್ಭುತರಮ್ಯ ಮನೋಹರ ಕಾದಂಬರಿ !

ಸುಮಾರು ೨೦೦ ಪುಟಗಳು !

**ಎರಡೂ ಡಿಸೆಂಬರದಲ್ಲಿ ಪ್ರಕಟವಾಗುವವು.**

# ನಲ ದಮಯಂತಿ

## ಮೊದಲನೆಯ ಅಂಕವು

### ನಾಂದೀ

**ಸೂತ್ರಧಾರ:—**

ಧಾಟಿ:—'ಅವನ ಕರೋ ತುಮಚೆ' ಎಂಬಂತೆ.

ಶುಭವ ಸದಾ ನೀಡೈ ಪ್ರಭೋ ನೀನೆಮಗೆ
ರಮೇಶಾ ದುರಿತವ ದೂಡೈ ॥ ಪಲ್ಲ ॥

ಕಾಪಾಡಲು ನೀಂ ಸಾಧು ಸಮಾಜವ ।
ಪಾಪಾತ್ಮರಿಗೆ ಶಾಸನಗೈಯಲು ॥
ಸ್ಥಾಪಿಸಲ್ಕೆ ಸದ್ಧರ್ಮವನು ।
ಶ್ರೀಪತಿ, ನೀನವತಾರವ ಮಾಳ್ಪಿ ॥ ೧ ॥
ಉಚ್ಛೇದಿಪನ್ಯೆ ಕಲಿ ಧರ್ಮವನು ।
ಸಚ್ಚೇತಸರನು ಬಲು ಬಾಧಿಪನ್ಯೆ ॥
ಅಚ್ಯುತ ನೋಡೈ ದಯಾಲು ।
ಸಚ್ಚಾರಿತ್ರನೆ ನಿಗ್ರಹಿಸವನಂ ॥ ೨ ॥

ಭಗವಂತನ ಮಂಗಲಕರವಾದ ನಾಮೋಚ್ಚಾರದ ಮಹಿಮೆ ನೋಡಿರಿ! ಆತನ ನಾಮವನ್ನು ಪಠಿಸಿದ ಮಾತ್ರದಿಂದಲೆ ನನ್ನ ಚಿತ್ತಶುದ್ಧಿಯಾದಂತಾಗಿ ಹೃದಯದಲ್ಲಿ ಭಕ್ತಿಭಾವವು ತುಂಬಿಕೊಂಡಿದ್ದರಿಂದ ಮೈಯಲ್ಲಿ ರೋಮಾಂಚಗಳೆದ್ದವು.

ಜಗದೀಶಾ, ಈ ಪುಷ್ಪಾಂಜಲಿಯನ್ನು ಸ್ವೀಕರಿಸಿ, ಸತ್‌ಕಥಾಶ್ರವಣವನ್ನು ಮಾಡುವಂಥ ಸದ್ಬುದ್ಧಿಯನ್ನು ಲೋಕಕ್ಕೆ ದಯಪಾಲಿಸು.

(ಪುಷ್ಪಾಂಜಲಿಯನ್ನು ಸಮರ್ಪಿಸಿ ಹೋಗುತ್ತಾನೆ.)

ಇದು ನಾಂದಿಯಾಯಿತು.

---

## ಮೊದಲನೆಯ ಪ್ರವೇಶವು.

ಸ್ಥಳ:—ಚಿತ್ರಮಯವಾದದ್ದೊಂದು ವನೋದ್ದೇಶವು.

(ರಸಜ್ಞ ಮಂಜುಲೆಯರೆಂಬ ಗಂಧರ್ವ ತರುಣ-ತರುಣಿಯರು.)

**ಮಂಜುಲಾ:—** (ಓರ್ವಳೇ)

(ರಾಗ—ಮುಲ್ತಾನಿ; ತಾಳ—ತ್ರಿವಟ.)

ಗೌರವಿಪುದು ಜಗ ಮುದವೆಂದು ।
ನಾರಿಯೇ ರೂಪವತಿಯೆಂದು ॥ ಪಲ್ಲ ॥
ಕವನ ಸ್ತವನ ಸಂಭಾವನದೊಡನೆ ಸತಿಯೆ ನೀಂ ಗತಿಯೆಂದು
ದಿವಿಜರು ಮಾನವರರದೆ ಪಾಡುವದೇಕೆ? ಚಲುವಿಕೆಯೆಂದು! ॥ ೧ ॥

ಸ್ತ್ರೀಯರಿಗಿಂತಲೂ ಪುರುಷರೇ ಸುಂದರರಂತೆ! ಪುರುಷರಲ್ಲಿ ಪರಾಕ್ರಮವೂ, ಬಲವೂ ಅಧಿಕವಾಗಿರುವಂತೆಯೇ ನಮ್ಮಲ್ಲಿ ಸೌಂದರ್ಯವು ಹೆಚ್ಚಾಗಿರುವದು ನಿಸರ್ಗಸಿದ್ಧವಾದ ಮಾತು! ಆದರೂ ಪುರುಷರೇ ಸುಂದರರೆಂಬುದನ್ನು ಸಿದ್ಧಮಾಡಿಕೊಡುತ್ತೇವೆಂದು ಹೇಳಿ ಪ್ರಾಣಕಾಂತರು ಲೋಕೈಕ ಸುಂದರನಾದ ಪುರುಷನೋರ್ವನ ಶೋಧಕ್ಕಾಗಿ ಹೋಗಿರುತ್ತಾರೆ.

ನಾನಾದರೂ ಭೂಮಂಡಲವನ್ನೆಲ್ಲ ಸುತ್ತುಹಾಕಿ ನಕ್ಷತ್ರಮಾಲೆಯಂತೆ ಇರುವ ರಾಜಕುಮಾರಿಯನ್ನು ಕಂಡುಕೊಂಡು ಬಂದಿದ್ದೇನೆ. ಪ್ರಾಣನಾಥರು ಹುಡುಕಿಕೊಂಡು ಬರುವ ಸುಂದರನಾದ ಪುರುಷನು ಈ ವಿದರ್ಭರಾಜನಂದಿನಿಯಾದ ದಮಯಂತಿಯ ಪಾಸಂಗಕ್ಕಾದರೂ ಹತ್ತಬಲ್ಲನೆ? ಪಣವನ್ನು ಸೋತರೆ ಪ್ರಾಣನಾಥರು ತಮ್ಮ ಕಿನ್ನರಿಯನ್ನು ನನಗೆ ಕೊಡುವೆನೆಂದು ಹೇಳಿದ್ದಾರೆ. ಅವರಿನ್ನು ಬಂದಾದರೂ ಬರಲಿ! ಆ ಕಿನ್ನರಿಯನ್ನು ಕಸುಕೊಳ್ಳದಿದ್ದರೆ ನನ್ನ ಹೆಸರೇ ಮಂಜುಲೆಯಲ್ಲ!

ಈ ಸಮಯಕ್ಕೆ ನಾವು ಇದೇ ಮಂದಾರ ವೃಕ್ಷದ ಹತ್ತರ ಮಿಲಿತರಾಗಬೇಕೆಂದು ಸಂಕೇತಮಾಡಿಕೊಂಡು ಹೋಗಿದ್ದೆವು. ನನ್ನ ಮನೋರಮಣರಾದ ರಸಜ್ಞರಾಜರಿನ್ನೂ ಯಾಕೆ ಬರಲಿಲ್ಲಾದೀತು? ನಾನು ಪ್ರಾಣಕಾಂತರನ್ನಗಲಿ ಸ್ವಲ್ಪಕಾಲವಾಗಿದ್ದರೂ ನನ್ನ ಮನಸ್ಸು ವ್ಯಗ್ರವಾಗಿದೆ! ರಸಜ್ಞರಾಜರ ಸುಹಾಸಯುತವಾದ ಮುಖವನ್ನು ಕಾಣದೆ ನನ್ನ ಮನಸ್ಸಿಗೆ ಸಮಾಧಾನವೇ ಆಗದು!

ಪ್ರಾಣಕಾಂತ ಬಾರದಿರುವನೇಕೆ ಬೇಗನೆ ।
ಕಾಣೆ ನಾನು ! ಮನದೊಳಿಂದೆ ಬಳಲುತಿರುವೆನು ॥
ಕಾಂತ ಬಳಿಯೊಳಿರಲು ನಮಗೆ ಜಂಭ ಪಿರಿದಿರೆ ।
ಭ್ರಾಂತಿ ಬರುವದಕಟ ರಮಣನಾಗೆ ಕಣ್ಮರೆ ॥
ಪಣವಗೆಯ್ದ ನೆವಕೆ ನೀನು ಮುನಿಸುಗೊಂಡೆಯಾ ? ॥
ಪ್ರಣಯ ತಿಳಿಯದೇಂ ರಸಜ್ಞ ನಿನಗೆ? ಬಂದೆಯಾ !! ॥ ೧ ॥

(ರಸಜ್ಞನು ಪ್ರವೇಶಿಸಿ ಮೆಲ್ಲನೆ ಮಂಜುಲೆಯ ಕಣ್ಣುಗಳನ್ನು ಮುಚ್ಚುತ್ತಾನೆ.)

**ಮಂಜುಲಾ:**—ಅವ್ವಯ್ಯಾ !! (ಎಂದು ಸಾಹಸದಿಂದ ಕಣ್ಣು ಬಿಡಿಸಿಕೊಂಡು ಹಿಂತಿರುಗಿ ನೋಡಿ) ಯಾರು ? ರಸಜ್ಞರಾಜ, ನೀವೆ ? ನಾನೆಷ್ಟು ಭಯಾಕುಲಳಾದೆ ! ಇದೆಂಥ ಚೇಷ್ಟೆ ? !!

**ರಸಜ್ಞ:**—ಚೇಷ್ಟೆಯಲ್ಲ ಪ್ರಿಯೆ ! ಸಂಭ್ರಾಂತಿವ್ಯಂಜಕವಾದ ನಿನ್ನ ಮುಖಮುದ್ರೆಯು ಹೇಗೆ ಚಮತ್ಕಾರವಾಗಿ ಕಾಣುತ್ತದೋ ನೋಡಿದೆನು.

**ಮಂಜುಲಾ:**—ಅದಿರಲಿ ! ನಿಮ್ಮ ಹಾದಿಯನ್ನಾದರೂ ಎಷ್ಟು ನೋಡಬೇಕದು ?

**ರಸಜ್ಞ:**—ಮಂಜುಲೆ, ನಾನಾಗಲೇ ಬಂದವನು ರಾಗಪರಿವಾಹಿಯಾದ ನಿನ್ನೀ ಗೀತಿಯನ್ನು ಕೇಳಿ ಮೈಮರೆತು ನಿಂತಿದ್ದೆನು.

**ಮಂಜುಲಾ:**— (ಮಂದಹಾಸದಿಂದ) ನಿಂತಿರುವಿರಾದೀತು !! ಅನ್ಯರ ಸ್ವೈರಾಲಾಪಗಳನ್ನು ಕಳ್ಳತನದಿಂದ ಕೇಳಲು ನೀವು ಯಾವಾಗಲೂ ನಿಂತೇ ಇರುತ್ತೀರಿ !

**ರಸಜ್ಞ:**—ಪ್ರಿಯೆ, ಗಂಧರ್ವಕುಮಾರಿಗೆ ಅನುರೂಪವಾಗಿ ಗಾನ ಮಾಡಿದಿ; ಆದರೆ, ಇನ್ನುಮೇಲೆ ನೀನು ಹಾಡುವದಾದರೆ ಈ ನಿನ್ನ ಪ್ರೀತಿಯ ವೀಣೆಯನ್ನು ಬಿಟ್ಟುಕೊಟ್ಟು ಹಾಡಬೇಕಾಗಿದೆ. ಯಾಕಂದರೆ ಅದನ್ನು ನೀನು ಪಂಥದಲ್ಲಿ ನನಗೆ ಸೋತಿರುವಿ. ತಾ ಅದನ್ನಿಲ್ಲಿ !

**ಮಂಜುಲಾ:**—ಅಹಹಾ !! ತಮ್ಮ ಬಾಯಿಂದ ಏನು ಮುಕ್ತಾಫಲಗಳು ಉದುರಿದವು ? ಈ ವೀಣೆಯು ಎಂದಿಗಾದರೂ ನಿಮ್ಮದಾದೀತೆ ? ನೀವೇ

ನಿಮ್ಮ ಕಿನ್ನರಿಯನ್ನು ಕಳಕೊಂಡಿರುವಿರಿ! ಪಂಥವನ್ನು ಗೆದ್ದವಳು ನಾನು!!! (ಎಂದು ಎದೆಗೆ ಕೈ ಮುಟ್ಟಿಕೊಳ್ಳುತ್ತಾಳೆ.)

**ರಸಜ್ಞ:**—ಮಂಜುಲೆ, ನಿನಗಿಷ್ಟು ತಿಳಿಯಲೊಲ್ಲದೆ? ಪುರುಷನಾದ ಸೃಷ್ಟಿಕರ್ತನು ಪುರುಷರಿಗಿಂತ ಸ್ತ್ರೀಯರಿಗೆ ಹೆಚ್ಚಿನ ಸೌಂದರ್ಯವನ್ನು ಕೊಡುವನೇ? ಗಂಡುನವಿಲು ಅಂದವಾಗಿ ಕಾಣುವದೋ ಹೆಣ್ಣುನವಿಲೋ? ನೀನೇ ಹೇಳು! ಹೆಣ್ಣುಸಿಂಹಕ್ಕಿಂತಲೂ ಗಂಡುಸಿಂಹವು ಸುಂದರವಾದದ್ದೆಂದು ಮೂಢರು ಕೂಡ ಹೇಳಬಹುದು. ಇನ್ನು ನಾವು ಪುರುಷರು ಪ್ರೇಮ ಪರವಶರಾಗಿ ನಿಮ್ಮ ಸ್ತುತಿ ಮಾಡುತ್ತೇವೆಂದು ನೀವು ಅಟ್ಟಕ್ಕೇರಿರುವಿರಿ.

**ಮಂಜುಲಾ:**—(ತುಸು ಖಿನ್ನಳಾಗಿ) ಹೀಗೆ ಸಾದೃಶ್ಯದಿಂದ ವಾದವನ್ನು ಗೆದೆಯಲಿಕ್ಕಾಗದು! ನರನು ನಾರಿಗಿಂತಲೂ ಸುಂದರನೋ ಅಲ್ಲವೋ ಎಂಬದೇ ನಮ್ಮ ವಾದದ ವಿಷಯವು.

**ರಸಜ್ಞ:**—ಅದರದೂ ನಿರ್ಣಯವಾಗುವದು! ನಿಷಧ ದೇಶದ ತರುಣನಾದ ಚಕ್ರವರ್ತಿಯ ಅಪ್ರತಿಮವಾದ ರೂಪವನ್ನು ನೀನು ನೋಡಿದೆಯಾದರೆ ಈ ವೀಣೆಯನ್ನೇಕೆ, ಅಭಿಮಾನವನ್ನು ಕೂಡ ಬಿಟ್ಟುಬಿಡುವಿ. ಆ ನಲ ಮಹಾರಾಜನ ಸೌಂದರ್ಯದ ವರ್ಣನೆಯನ್ನು ಯಾರು ಮಾಡಬಲ್ಲರು?

**ಮಂಜುಲಾ:**—ಆಗಲಿ, ವರ್ಣನೆಯಾಗಲಿ!

**ರಸಜ್ಞ:**—ಕೇಳು! ಮನಸ್ಸುಕೊಟ್ಟು ಕೇಳು!!

ಧಾಟಿ:—ಭರನ ನ ದೇತ್ ಘಾಘರಿಯಾ.

ನಿರುಪಮ ರೂಪನು ನಲನು ಕಾಂತೆ ಕೇಳೆ ।
ನಾರೀ ಮಾನಸದೊಳ್ ನಲಿವ ನವಮರಾಳನು ।
ಮೆರೆವ ಮಾರನೇನೆ ನೋಡೀ ವರದೇಹಿಯು ॥ ಪಲ್ಲ ॥
ವಿಪುಲ ಹೃದಯನಿವ ಪಿಡಿಯುವನೇನೆ ।
ನೃಪನು ಮಹಿಯನೇ ಬಾಹುಗಳಲಿ ತಾನು ।
ತಪನ ಪ್ರಭನು ಮಹಾವೀರನು ಬಲಸಾರನು ॥ ೧ ॥

**ಮಂಜುಲಾ:**—ನಿಮ್ಮಂಥ ನಿಪುಣರು ಹೀಗೆ ವರ್ಣಿಸುತ್ತಿರಲು ನಲ ರಾಜನು ಬಹು ಸುಂದರನಾದ ಪುರುಷನೆಂದು ಒಪ್ಪಿಕೊಳ್ಳಬಹುದು. ನಿಮ್ಮ

ಕೈಯಲ್ಲಿರುವ ಆ ಚಿತ್ರವನ್ನು ಇಲ್ಲಿ ಕೊಡಿರಿ ನೋಡೋಣ! ನಾನು ಕಂಡುಬಂದಿರುವ ವನಿತಾಮಣಿಯ ಸೇವಕನಾಗಲಿಕ್ಕಾದರೂ ನಿಮ್ಮಿ ಸುಂದರ ನಾದ ಪುರುಷನು ಯೋಗ್ಯನಿರುವನೋ ಇಲ್ಲವೊ ಹೇಳುವೆನು.

**ರಸಜ್ಞ :**— ಹಾಂ! ಹಾಂ!! ನೀವು ನೋಡಿ ಬಂದ ಸುಂದರಿ ಯಾರು? ಅವಳದಿಷ್ಟು ವರ್ಣನೆಯಾಗಲಿ!

**ಮಂಜುಲಾ:**—ಆ ಸುಂದರಿಯು ವಿದರ್ಭರಾಜನ ಮಗಳಾದ ದಮಯಂತಿಯು. ಸೃಷ್ಟಿಕರ್ತನು ಅನೇಕ ವರ್ಷಗಳಿಂದ ಕಲ್ಪನೆ ಹಾಕುತ್ತ ಹಾಕುತ್ತ ಕಡೆಗೆ ಆ ಲಾವಣ್ಯದ ಪುತ್ಥಳಿಯನ್ನು ನಿರ್ಮಿಸಿರಬಹುದು ಕಂಡಿರೋ!

ಧಾಟಿ:—"ಆನಂದಸಾ-ಗರವೋ" "ಅಥವಾ ಬಿಂಬಾಧರಾ ಮಧುರಾ"

ಕಾಂತಾಮಣಿ, ರಮಣಿ ॥ ರಮಣಿ ಮೃದುಹಾಸವತಿ
ವಿಲಾಸಿನೀ, ರಮಣಿ ॥ ಪಲ್ಲ ॥
ಸಮ್ಮೋಹವಾ, ಸಲಿ ಬೀರುವಾ, ನವಮೋಹಿನಿಯೋ
ಆ ತರುಣೀ ॥ ೧ ॥
ಬಿಂಬಾಧರಾ, ಅವಳಿಂದಿರಾ ಸದೃಶೆ ಸುದೃಶೆ ಪ್ರೇಮುಖಿಣೀ ॥ ೨ ॥

ನಾನು ಆ ಭುವನೈಕ ಸುಂದರಿಯು ಚಿತ್ರವನ್ನು ಬರೆದು ತಂದಿರುವೆನು ನೋಡಿಕೊಳ್ಳಿರಿ! ಸೋತಿರೋ?

**ರಸಜ್ಞ :**—(ಚಿತ್ರವನ್ನು ನೋಡಿ ನಕ್ಕು) ಪ್ರಿಯೆ, ಇವಳು ಒಳ್ಳೆ ರೂಪವತಿಯು. ಆದರೆ ನಿನಗಿಂತಲೂ ಇವಳು ಚಲುವೆಯೆಂದು ಮಾತ್ರ ನಾನು ಹೇಳಲಾರೆನು!

**ಮಂಜುಲಾ:**—(ಮಂದಹಾಸದಿಂದ ಗೋಣುಹಾಕಿ) ಸಾಕುಮಾಡಿರಿ!

ಧಾಟಿ:—ಆಯಿ ಕಾರೆ ಬದರಿಯ ಹಾ

ಯಾಕೆ ಮೋಹ ಸುರಿಸುವಿ ನೀ । ಯಾಕೆ......॥ ಪಲ್ಲ ॥
ಕಾಂತ ನಿನಗೆ ಮನಸೋತ ಸತಿಯು ನೇ–।
–ನಿಂತೀ ಸನಿ ಮಾತಾಡಿ ವಂಚಿಪೆ । ನೀ । ಯಾಕೆ...॥ ೧ ॥
ಮೋಸವನರಿತು ನಾ ಮೋಹಿಸುವೆ ।
ಪತೀಕರಣದೊಳ್ ಜಾಣನಿರುವೆಯೋ । ನೀ । ಯಾಕೆ...॥ ೨ ॥

ಪ್ರಿಯರೆ, ನಲರಾಜನ ಚಿತ್ರವನ್ನು ಈ ಚಾರ್ವಾಂಗಿಯ ಚಿತ್ರಕ್ಕೆ ಹಿಡಿಯಿರಿ ನೋಡೋಣ !

**ರಸಜ್ಞ:**—ಇದು ನೋಡು (ಎಂದು ಚಿತ್ರಗಳನ್ನು ಒಂದಕ್ಕೊಂದು ಹಿಡಿದು) ಪ್ರಿಯೆ, ಇನ್ನಾದರೂ ಹೇಳು ! ಪಂಥವನ್ನು ಗೆದ್ದವರು ಯಾರು ? ನೀನೋ ನಾನೋ ?

**ಮಂಜುಲಾ:**—ಪಂಥದ ಮಾತು ಹಾಗಿರಲಿ ! ಇವರೀರ್ವರೂ ಜಗತ್ತಿಗೆ ಮಿಗಿಲಾದ ರೂಪವಂತರು. ಒಬ್ಬರಿಗೊಬ್ಬರು ಒಪ್ಪುವಂಥ ಈ ಸ್ತ್ರೀಪುರುಷರು ದಂಪತಿಗಳಾಗುವುದು ಯೋಗ್ಯವಲ್ಲವೆ ?

**ರಸಜ್ಞ:**—(ಮಂಜುಲೆಯ ಕೈ ಹಿಡಿದು) ಮನಮೋಹಿನಿ, ತಮ್ಮ ಕಾರ್ಯವನ್ನೇ ತಾವು ಅರಿಯದವರು, ಅನ್ಯರ ಕಾರ್ಯವನ್ನು ಮಾಡ ಬಲ್ಲರೆ ?

**ಮಂಜುಲಾ:**—ಪ್ರಿಯರೆ, ನೀವು ವಿನೋದಿಗಳೆಂದೇ ನನ್ನ ಮನಸ್ಸನ್ನು ಸಮಗ್ರನಾಗಿ ಸೆಳೆದುಕೊಂಡಿರುವಿರಿ ! ವಿವಾಹದ ಚಿಂತೆ ಇನ್ನೇಕೆ ? ಚಿತ್ರಸೇನ ಮಹಾರಾಜರು ರಾಜಧಾನಿಗೆ ಮರಳಿ ಬರುವದೊಂದೇ ತಡ, ನಾವು ದಂಪತಿ ಗಳೇ ಆಗುವೆವಲ್ಲೆ ? ಸದ್ಯಕ್ಕೆ ನಾವು ನಲದಮಯಂತಿಯರ ವಿವಾಹದ ಘಟನೆ ಗಾಗಿ ಯತ್ನ ಮಾಡೋಣ ಬನ್ನಿರಿ !

**ರಸಜ್ಞ:**—ನಿನ್ನಂತೆಯೇ ಆಗಲಿ. ಆದರೆ ಈ ಕ್ಷಣದಲ್ಲಿ ನೀನು ನನ್ನ ದೊಂದು ಕೋರಿಕೆಯನ್ನು ಪೂರೈಸತಕ್ಕದ್ದು !

**ಮಂಜುಲಾ:—ಪೀಠಿಕೆ ನೋಡಿದರೆ ಏನಾದರೂ ಕುಚೇಷ್ಟೆ ಇರಬಹು** ದಾಗಿ ತೋರುತ್ತದೆ ! ಏನದು ?

**ರಸಜ್ಞ:—ಹೇಳಲಿಯಾ ?**

**ರಾಗ–ಭೂಪ; ಆದಿತಾಳ.**

**ಧಾಟಿ:—ಚಮಕ ಚಲೀ ಮಾಲನ ಬೀಜಲಿಯಾ**

ಬಯಕೆಯಿದೆ ! ಮಾನಿನಿ ಲಾಲಿಸೆ ನೀಂ ॥
ದಯದಿಂದೆ ನೀಡೆ ಅಧರಾಸವನೆ ॥
ಪೀಯೂಷವಹುದೆ, ಕಾಂತೆ, ಮಹಿಯೊಳದೇ ॥ ಪಲ್ಲ ॥

ಯೌವನಗರ್ವಿತರಾದ ತರುಣರು ।
ಯುವತೀ ಜನರಾಧೀನರಾಗಿರುವ್ರೊಲ್ ।
ದೇವನು ಮಾಯೋಪಾಯದಿ ಮೋಹವ ।
ತೀವಿದನು, ಕೇಳ್ ಬಿಂಬಾಧರದೊಳ್ ॥ ೧ ॥

**ಮಂಜುಲಾ:**—ಇವೆಲ್ಲಾ ಗೊತ್ತು ನಮಗೆ! (ರಸಜ್ಞನನ್ನು ಭರದಿಂದ ಅಪ್ಪಿಕೊಂಡು) ಆಯಿತೆ?

**ರಸಜ್ಞ:**—ಅಹುದು ಪ್ರಿಯೆ, ನಾವು ಇನ್ನು ಹೀಗೆ ಮಾಡೋಣ! ನೀನು ಈ ನಲರಾಜನ ಚಿತ್ರವನ್ನು ತೆಗೆದುಕೊಂಡು ಹೋಗಿ ದಮಯಂತಿಗೆ ಕೊಟ್ಟು ಈ ಪುರುಷಸಿಂಹನಾರೆಂಬುದನ್ನು ಅವಳಿಗೆ ಹೇಳು. ನಾನು ದಮಯಂತಿಯು ಚಿತ್ರವನ್ನು ನಲರಾಜನ ಕೈಗೆ ಕೊಟ್ಟು ಅವಳ ಲಾವಣ್ಯದ ವರ್ಣನೆಯನ್ನು ಬಹುಪರಿಯಾಗಿ ಮಾಡುವೆನು.

**ಮಂಜುಲಾ:**—ಒಳ್ಳೆ ಹಂಚಿಕೆ ತೆಗೆದಿರಿ! ಪರಸ್ಪರರ ಚಿತ್ರಗಳನ್ನು ನೋಡಿ ಅವರೀರ್ವರೂ ಪ್ರೇಮಪರವಶರಾಗುವರು. ಮತ್ತೊಂದೇನೆಂದರೆ, ನಾವು ಸಾಕಿದ ಹಂಸಗಳು ಪ್ರೇಮಿಗಳ ಸಂದೇಶಪತ್ರಗಳನ್ನು ಜಾಣ್ಮೆಯಿಂದ ತಲ್ಪಿಸಬಲ್ಲವು. ಅವುಗಳನ್ನು ನಾವು ನಲದಮಯಂತಿಯರ ಸೇವೆಗೆ ಕೊಟ್ಟು ಬಿಡೋಣ.

**ರಸಜ್ಞ:**—ಆಗಲಿ, ಆ ಹಂಸಗಳ ಜಾಣ್ಮೆಯನ್ನು ನಾವೀರ್ವರೂ ಮನಗಂಡಿರುತ್ತೇವೆ.

**ಮಂಜುಲಾ:**—ಅಹುದೇನು ? !! (ಮಂದಹಾಸ ಮಾಡುತ್ತಾಳೆ)

**ರಸಜ್ಞ:**—ಒಳ್ಳೇದು; ನಾನಿನ್ನು ನನ್ನ ಕೆಲಸಕ್ಕೆ ಹೋಗುವೆನು. ನೀನಾದರೂ ವಿಲಂಬ ಮಾಡುವದೇಕೆ ?

**ಮಂಜುಲಾ:**—ನಡೆಯಿರಿ ಹಾಗಾದರೆ!

(ಹೋಗುತ್ತಾರೆ)

( ತೆರೆ )

---

## ಎರಡನೆಯ ಪ್ರವೇಶವು

ಸ್ಥಳ—ನಿಷಧಪುರದಲ್ಲಿ ರಾಜನ ವಿಶ್ರಾಂತಿಗೃಹವು.

(ರಾಜನೂ ವಿದೂಷಕನೂ)

**ರಾಜಾ:**—(ಸ್ವಗತ)· ಛೀಃ ! ನಾನೆಷ್ಟುಪರಿಯಾಗಿ ಸಮಾಧಾನ ಮಾಡಿಕೊಂಡರೂ ಮನಸ್ಸು ಸ್ಥಿರವಾಗಲೊಲ್ಲದು. ಆ ಗಂಧರ್ವನು ಈ ಮನೋಹರವಾದ ದಮಯಂತಿಯ ಚಿತ್ರವನ್ನು ನನ್ನ ಕೈಯ್ಯಲ್ಲಿ ಕೊಟ್ಟು ಹೋದಂದಿನಿಂದ ನನಗೆ ಹುಚ್ಚೇ ಹಿಡಿದಂತಾಗಿದೆ! ನೋಡಿದರೆ ಈ ಚಿತ್ರದಲ್ಲಿ ಪಟವೂ ಬಣ್ಣಗಳೂ ಅಲ್ಲದೆ ಮತ್ತೇನಿದೆ? ಆದರೂ . ಚಿತ್ರಕಲಾನಿಪುಣನ ತಗಲು ಎಂಥ ವಿಲಕ್ಷಣವಾಗಿದೆ !

ರಾಗ:—ಛಾಯಾನಟ.

ಧಾಟಿ:—"ಮನೇ ಬಾಗಿಲದೊಳು ಬಂದು ನಿಂದಿಹಳು"

ಮನೋಹಾರಿಣಿಯುಳ ರೂಪಲೇಖವಿದು ॥
ಮನದೊಳು ಬಲು ಮೋಹವನು ಜನಿಸುತಿಹುದು ॥ಪಲ್ಲ॥

ಸುದತಿಯ ಮುಖದಲಿ ಮಧುರ ಸುಹಾಸವು ।
ಮುದವನು ಸೂಸುವ ಕೌಮುದಿಯೋ ॥
ವಧುಮಣಿ ಧರಿಸಿದ ಜರದ ದುಕೂಲವು ।
ಮೃದುಪವನಕೆ ತಾಂ ಚಲಿಸುವದೋ ॥ ಎನೆ ॥ ೧ ॥

ಮಡದಿಯು ಸೊಬಗಿಲಿ ಮುಡಿಗೆ ಹಾಕಿದ ಹೂ ।
ಒಡೆದು ಸುಗಂಧವೇನಿಡುಗುವದೋ ॥
ಬೆಡಗಿನ ಕಾಮಿನೀ-ಮಣಿ ಬಿಡದೆನ್ನನು ।
ಕಡೆಯುಗಣ್ಣಲಿ ನೋಡುತಲಿಹಳೋ ॥ ಎನೆ ॥ ೨ ॥

ನವರಸಗಳಿಂದ ಪರಿಪ್ಲುತವಾದ ಅನೇಕ ಕಾವ್ಯನಾಟಕಗಳನ್ನು ನಾನು ಓದಿದೆನು. ಆದರೆ ಅವುಗಳಿಂದ ನನ್ನ ಮನಸ್ಸು ಎಷ್ಟುಮಾತ್ರವೂ ವ್ಯಗ್ರವಾಗಲಿಲ್ಲ. ಆ ಗಂಧರ್ವನು ನಾಲ್ಕೇ ಮಾತುಗಳಲ್ಲಿ ಮಾಡಿದ ದಮಯಂತಿಯ ಸ್ತುತಿಯನ್ನು ಕೇಳಿ ನಾನಿಷ್ಟು ವಿಕಾರವಶನಾಗಬಹುದೆ! ಅನಂಗನ ಮಹಿಮೆ !

ರಾಗ—ಛಾಯಾನಟ.

ಧಾಟಿ:—ಪ್ಯಾರೇ ಲಪಟ ಪ್ರೀತ ಬುರೀ ನಾರಕೀ.

ಸ್ಮರಶರದ ಲಾಘವವ ನೋಡಿದ್ಯೆ ।। ಪಲ್ಲ ।।
ಭ್ರಾಂತನಾಗಿ ನೋಡುತೆ ನಾನಿರುತಿರೆ ॥
ಕಾಂತೆಯುಂದದ ತನುವಿದನು, ಮೋಸದಲಿ ಪೂಡಿದನೇಂ
ಸ್ಮರ ಬಾಣವಾ ।। ೧ ।।
ಬಾಧೆಯಾಗದೊಲ್ ರಮಣೀ ಸಯುನದಿ ।
ಹಾಯ್ದು ಬಂದಿಹ ಶರವಿರದೆ ಸೀಳಿತೆನ್ನಮಾನಸವೀಪರಿ ನೋಡಿದ್ಯೆ ॥೨॥

(ಉಸುರ್ಗರೆದು) ಭಗವನ್, ಮಕರಧ್ವಜಾ, ನಿನಗೆ ನಾನು ಶರಣಾಗತನಾಗಿರುವೆನು. ಬಾಧಿಸಬೇಡ ಕಂಡೆಯಾ !!

(ವಿದೂಷಕನು ಪ್ರವೇಶಿಸುತ್ತಾನೆ)

**ವಿದೂಷಕ:**—ಮಹಾರಾಜರಿಗೆ ಜಯಜಯಕಾರವಿರಲಿ ! ದೇವರೂ, ಬಡಮಿತ್ರನು ಶರಣು ಹೊಡೆಯುತ್ತಾನೆ, ಕೃಪಾದೃಷ್ಟಿಯಾಗಬೇಕು ! (ಎಂದು ಖೊಳ್ಳನೆ ನಗುತ್ತಾನೆ)

**ರಾಜಾ:**—ಯಾರು ! ? ಉತ್ಸವಮೂರ್ತೀ, ನೀನೇನು ? ಬಾ, ಕುಳಿತುಕೊಳ್ಳು.

**ವಿದೂಷಕ:**—ಮಿತ್ರಾ, ಕುಳಿತುಕೊಳ್ಳುವ ಸಮಯವೇ ಇದು ? ಈಗಲೇ ನಾನು ಯುದ್ಧಕ್ಕೆ ಹೊರಡುವವನಾಗಿದ್ದೇನೆ !

**ರಾಜಾ:**—ಯುದ್ಧಕ್ಕೆ ! ನೀನು ಯುದ್ಧಕ್ಕೆ ! ?

**ವಿದೂಷಕ:**—ಮಿತ್ರಾ, ನಿನ್ನಂಥ ಮಹಾವೀರನು ವೈರಿಗೆ ಶರಣು ಹೋಗುತ್ತಿರುವದನ್ನು ಕಂಡು ನಾನು ಹೇಡಿಯಂತೆ ಮನೆಯಲ್ಲಿ ಕೂತುಕೊಳ್ಳಲಿಯಾ ?

**ರಾಜಾ:**—(ತಿರಸ್ಕಾರದಿಂದ) ಏನೆನ್ನುವಿ ಉತ್ಸವಮೂರ್ತಿ ?

**ವಿದೂಷಕ:**—ಮೂಢರಾದ ದೊರೆಗಳ ಮಕ್ಕಳಿಗೆ ಒಡೆದು ಹೇಳದಿದ್ದರೆ ಯಾವ ಮಾತು ತಾನೆ ತಿಳಿದೀತು ?

**ರಾಜಾ:**—ಮೂರ್ಖಾ, ದೊರೆಮಕ್ಕಳ ಸೇವಮಾಡಿ ನನಗೆ ಮೂಢ ನೆನ್ನುವಿಯಾ ?

**ವಿದೂಷಕ:**—(ನಕ್ಕು) ಎಲ್ಲಿಯ ಮಾತೇ ! ಮಿತ್ರಾ, ನಾನು ನಿನ್ನ ಸ್ನೇಹಿತನಷ್ಟೆ ? ನಾನಂತೂ ಹೇಳಿಕೇಳಿ ಮೂರ್ಖನು. ಇನ್ನು ಮೂರ್ಖನ ಸ್ನೇಹಿತನು ಮಹಾಮೂರ್ಖನಲ್ಲದೆ ಮತ್ತಿನ್ನು ಹೇಗಿರುವನು.

**ರಾಜಾ:**—(ನಕ್ಕು) ಒಳ್ಳೇ ಪಂಡಿತನಿರುವಿ ! ಅದಿರಲಿ ಉತ್ಸವ ಮೂರ್ತಿ, ಯುದ್ಧವೆಲ್ಲಿಯದು ?

**ವಿದೂಷಕ:**—ನೀನೀಗಲೇ ಶರಣುಹೋದ ಮಕರಧ್ವಜನ ಕೂಡ ಪ್ರಚಂಡವಾದ ಸಂಗ್ರಾಮವನ್ನು ಮಾಡಿ ನಿನ್ನನ್ನು ಬಿಡಿಸಿಕೊಂಡು ಬರುವ ಕೆಲಸವು ನನ್ನದಲ್ಲೇ ?

**ರಾಜಾ:**—(ವಿದೂಷಕನ ಬೆನ್ನು ಚಪ್ಪರಿಸಿ ನಕ್ಕು) ಹೀಗೋ !! ಮಿತ್ರಾ, ಮನಸ್ಸಿನೊಳಗಿನ ಇಂಗಿತವನ್ನು ನಿನ್ನ ಮುಂದೆ ಹೇಳದೆ ಮತ್ತಿನ್ನಾರ ಮುಂದೆ ಹೇಳಲಿ ? ಗಂಧರ್ವಕುಮಾರನಾದ ರಸಜ್ಞನು ದಮಯಂತಿಯ ಲಾವಣ್ಯ ವನ್ನು ಅತಿಶಯವಾಗಿ ವರ್ಣಿಸಿ ಈ ಮೋಹಜನಕವಾದ ಚಿತ್ರವನ್ನು ನನಗೆ ಕೊಟ್ಟುಹೋದ ಸಂಗತಿಯು ನಿನಗೆ ಗೊತ್ತೇ ಇರುವದಷ್ಟೆ ?

**ವಿದೂಷಕ:**—ಓಹೋ ! ಇದೆಲ್ಲ ಅದರ ಪ್ರತಾಪವೇನು ?

**ರಾಜಾ:**—ಆ ಮಕರಧ್ವಜನ ಪ್ರತಾಪವೇ ಕಂಡಿಯಾ ! ಮನ್ಮಥನೆ,

ರಾಗ—ಯಮುನ.

ಧಾಟಿ:—ಮುಕುಟಪರ ವಾರಿಜಾವು ನಾಗರನಂದಾ.

**ಕುಸುಮಶರ ಕಾಡಬೇಡ ಕೋರುವೆ ನಿನ್ನಾಂ ॥ ಪಲ್ಲ ॥**
**ದಯಿತಾ-ಜನರೊಳ್ ಅಭಿಮಾನವ ತಾಳಿ ।**
**ನ್ಯಾಯುವೆ ಬಾಧಿಪುದೆನ್ನ ॥ ೧ ॥**
**ಮನಮೋಹಿನಿಗಾಂ ಮನಸೋತಿಹೆ ಕಾಣೋ ।**
**ಹಾನಿಯಿದೇತಕೆ ಮುನ್ನ ॥ ೨ ॥**

**ವಿದೂಷಕ:**—ಮಿತ್ರಾ, ರಾಜಕುಲೋತ್ಪನ್ನರ ವಿವಾಹದ ಪೂರ್ವಾಂಗವು ಕಾಮಬಾಧೆ, ವಿರಹವ್ಯಥೆ, ಭ್ರಾಂತಿ, ಪ್ರಲಾಪ ಮುಂತಾದವುಗಳಿಂದ

ತುಂಬಿಕೊಂಡಿರಬೇಕೆಂದು ಶಾಸ್ತ್ರವೇ ಇರುವುದಾಗಿ ತೋರುತ್ತದೆ. ಯಾವನೇ ರಾಜನ ವಿವಾಹದ ಇತಿಹಾಸವನ್ನು ನೋಡಿದರೂ ಇಂಥ ತಾಪಗಳ ಸಮುದಾಯವು ಇದ್ದೇ ಇರುತ್ತದೆ. ಈ ಅಂಧಪರಂಪರಾಗತವಾದ ರೀತಿಯನ್ನು ಬಿಟ್ಟುಕೊಟ್ಟು ನೀವು ನಮ್ಮ ವಿವಾಹದ ಪದ್ಧತಿಯನ್ನು ಅನುಸರಿಸಬಾರದೆ ? ನನ್ನ ಸೋದರತ್ತೆಯ ಮಗಳಾದ ಕಾಣಾಕ್ಷಿಯನ್ನು ತಂದು ಒಮ್ಮೆಲೆ ನನ್ನ ಕೊರಳಿಗೆ ಕಟ್ಟಿಬಿಟ್ಟರು. ವಿರಹವ್ಯಥೆಯೂ ಇಲ್ಲ ! ಕಾಮಾಬಾಧೆಯೂ ಇಲ್ಲ ! !

**ರಾಜಾ:**—(ಪರಿಹಾಸದಿಂದ ನಕ್ಕು) ದೈವವಂತನು ನೀನು !

**ವಿದೂಷಕ:**—ಮತ್ತೆ !!!

**ರಾಜಾ:**—ಮಿತ್ರಾ, ಮನಸ್ಸಿಗೆ ಅತಿಶಯವಾದ ಸಂತಾಪವಾಗಿದೆ. ಮತ್ತೆಲ್ಲಿಗಾದರೂ ಹೋಗೋಣ ನಡೆ.

**ವಿದೂಷಕ:**—ಎಲ್ಲಿಗೆ ಹೋದರೆ ನಿನ್ನ ಸಂತಾಪವು ನೀಗೀತು ? ಹೋದರೆ ದಮಯಂತಿಯ ಸನ್ನಿಧಾನಕ್ಕೇ ಹೋಗಬೇಕು.

**ರಾಜಾ:**—(ಅಪಹಾಸದಿಂದ) ಮಾತನಾಡೆಂದರೆ ಆಡಿದ !!

**ವಿದೂಷಕ:**—ರೇಗಿದವರ ಕೂಡ ಮಾತಾಡುವದೇ ಕಠಿಣ ! ಆದರೆ ನನಗಿದು ಬಿಡದ ಕರ್ಮವೆ ! ವಿಹಾರೋಪವನಕ್ಕೆ ಬರುವಿಯೇನು ? ವನಭೂಷಣನು ಅದನ್ನು ಈಗ ಬಹು ರಮ್ಯವಾಗಿ ಕಾಣುವಂತೆ ಮಾಡಿದ್ದಾನೆ.

**ರಾಜಾ:**—ಆಗಲಿ. ಅಲ್ಲಿಗೇ ಹೋಗೋಣ. ಈ ಚಿತ್ರವನ್ನು ಕೈಯಲ್ಲಿ ತೆಗೆದುಕೋ !

**ವಿದೂಷಕ:**—(ಚಿತ್ರವನ್ನು ನೋಡಿ ಆಶ್ಚರ್ಯಚಕಿತನಾಗಿ) ಅಬಬಬ!! ಏನು ಚಲುವಿಕೆ ಇದು ಮಿತ್ರಾ ! ನೋಡಿ ನೋಡಿದ ಹಾಗೆ ಇದರಲ್ಲಿ ಹೊಸ ಲಾವಣ್ಯಗಳು ವ್ಯಕ್ತವಾಗುತ್ತವೆ. ಮಿತ್ರಾ, ಅಂತೆಯೇ ನೀನು ಹೀಗೆ ಭ್ರಮಿಷ್ಟನಾಗಿರುವಿ !

**ರಾಜಾ:**—ನಿನ್ನಂಥವನನ್ನು ಕೂಡ ಈ ಚಿತ್ರವು ಚಕಿತನನ್ನಾಗಿ ಮಾಡುತ್ತಿರಲು ಆ ಮೋಹಿನಿಯ ನಿಜವಾದ ರೂಪವು ಹೇಗಿರಬಹುದು ನೋಡು !

ಧಾಟಿ:—ತ್ರೇಥೇಚ ಉಭೀ ಕೀ ಆಲೇ.

ಮೂಲೋಕವ ಮೋಹಿಸದಿಹಳೇ ।
ಈ ಲೋಲಾಯತ-ಲೋಚನೆಯು । ನೋಡಿದ್ಯೆ ॥ ಪಲ್ಲ ॥
ನೀಲಾಳಕಿ ತಾನೇಂ ರತಿಯೋ ।
ಬಾಲಾಮಣಿ ಬಿಂಬಾಧರೆಯು ॥ ನೋಡಿದ್ಯೆ ॥
ಆಲ್ಹಾದವು ಮನಕಾಗುವದ್ಯೆ ।
ಆಲೋಕಿಸಲಿ ಲೇಖವನು ॥ ನೋಡಿದ್ಯೆ ॥
ಈ ಲೋಲೆ । ವಿನಯ ಗುಣಶೀಲೆ । ಲಸಿತಸಲ್ಲೀಲೆ ।
ಹಸಿತಮುಖ ಕಮಲೆ, ಹಸಿತ..... ॥
ಭೂಲೋಕದಿ ನವಕಾಮಿನಿಯ್ಯೆ ॥ ನೋಡಿದ್ಯೆ ॥ ೧ ॥

(ತೆರೆ.)

---

## ಮೂರನೆಯ ಪ್ರವೇಶವು

ಸ್ಥಳ:—ವಿದರ್ಭರಾಜನ ಅಂತಃಪುರವು.

(ದಮಯಂತಿಯೂ ಸಖೀಜನರೂ)

**ದಮಯಂತಿ:**—ಚಂದ್ರಾವಲಿ, ತರುಣಿಯರು ಕಾಮಬಾಧೆಗಾಗಿ ಅತೀವ ವ್ಯಾಕುಲರಾಗುತ್ತಾರೆಂಬ ಮಾತು ಕೇಳಿ ಇಷ್ಟು ದಿನ ನನಗೆ ವಿಲಕ್ಷಣ ವಾದ ನಗೆ ಬರುತ್ತಿತ್ತು. ನಲಮಹಾರಾಜರ ಮನೋಹರವಾದ ಈ ಚಿತ್ರವನ್ನು ನೋಡಿದಂದಿನಿಂದ ನನಗುಂಟಾದ ಅವಸ್ಥೆಯನ್ನು ಕಂಡು ಈಗ ನೀವೇ ನಗುತ್ತಿರುವಿರಾದೀತು !

**ಚಂದ್ರಾವಲಿ:**—ಸಖಿ, ನಲಮಹಾರಾಜರ ರೂಪವೇ ಅಂಥ ಮೋಹ ಕರವಾದದ್ದು !

**ದಮಯಂತಿ:**—ಚಿತ್ರಗತರಾದ ಮಹಾರಾಜರ ಈ ರೂಪವನ್ನು ನೋಡಿದೆಯಾ !

ರಾಗ—ಪೂರಿಯಾ

ಪ್ರೇಮರಸವನೇಂ ಬೀರುವನೇನೆ ಮೋಹನನಿವ ಕಾಣೆ ||
ಕಾಮ ವಿಮೋಹಿತೆಯಾದೆನೆ ನೋಡಿ ಲೇಖವ ಸಲೆ ಜಾಣೆ ||
ಮನವಿದು ಭರದೊಳ್ ಕೇಳದೆ ಹಾಗೇ ಪೋಗುತಲಿಹುದೇನೆ ||
ಮನೋಜ್ಞರೂಪನ ಬಳಿಗೇಂ ಕೆಳದಿ, ಮೋಹ ತಳೆದು ತಾನೇ ||

**ಚಂದ್ರಾ:**—ದಮಯಂತೀ, ಈ ಚಿತ್ರವನ್ನು ನೋಡಿ ಸುರಸುಂದರಿಯರು ಕೂಡ ಮೋಹಿತರಾಗಬಹುದು !

**ದಮಯಂತಿ:**—ಸಖಿ, ನಲರಾಜರ ಕಾಂತಿಮಯವಾದ ಸುಮುಖವನ್ನು ಒಮ್ಮೆಯಾದರೂ ಕಣ್ಣಾರೆ ಕಾಣುವಷ್ಟು ಭಾಗ್ಯವು ನನ್ನದಿದ್ದೀತೇನೆ? (ನಿಟ್ಟುಸುರು ಹಾಕುತ್ತಾಳೆ.)

**ಚಂದ್ರಾ:**—ದಮಯಂತೀ, ಹಾಗೆ ಜೀವಕ್ಕೆ ಸಂತಾಪ ಮಾಡಿಕೊಂಡು ಉಸುರು ಹಾಕಬೇಡ! ಅಂಥ ಸರ್ವಾಂಗಸುಂದರನ ರಾಣಿಯು ನೀನಾಗತಕ್ಕ ವಳೆಂದೇ ಬ್ರಹ್ಮದೇವನು ಮನಸ್ಸು ಕೊಟ್ಟು ನಿನ್ನೀ ಭುವನಮೋಹಕವಾದ ರೂಪವನ್ನು ನಿರ್ಮಿಸಿರುವನು.

**ದಮಯಂತಿ:**—ಚಂದ್ರಾವಲಿ, ನನ್ನಲ್ಲಿ ಪಕ್ಷಪಾತವನ್ನು ತಾಳಿ ನೀನು ಹೀಗೆ ಮಾತನಾಡುವಿ ! ನಿರ್ದಯನಾದ ಮದನನೆ, ನೀನೆಷ್ಟೆಂದು ಕಾಡುವಿ !

ಧಾಟಿ:—ಬಾರಿಕ ಮೋಲನದೇ, ಭವರಾರೀ.

ಬಾಳಿದಿಯಾ ಮದನಾ ! ನಮಗಾಗಿ ॥ ಪಲ್ಲ ॥
ಅಬಲೆಯುರೆದೆಗೆ ಬಾಣವನು ಪೂಡಿ ।
ಶಬರನೆ ಕೊಲುವೆ ॥ ೧ ॥
ಮನದೊಳು ಜನಿಸಿ ಆ ಮನವ ಸೀಳ್ವಿ ।
ದನುಜನೀನೆಹುದೊ ॥ ೨ ॥

ಈಶ್ವರನು ನಿನ್ನ ದೇಹವನ್ನು ಸುಟ್ಟುಹಾಕಿದಂತೆ ನಿನ್ನ ಗುಣಗಳ ನ್ನಾದರೂ ಯಾಕೆ ಅಳಿಯಲಿಲ್ಲ ?

**ಚಂದ್ರಾ:**—ಸಖಿ, ನೀನು ಈ ಮಾರನ ಪೀಡೆಗೆ ಯಾಕೆ ಅಂಜುವಿ ? ನಲಮಹಾರಾಜರು ನಿನ್ನೀ ದಿವ್ಯವಾದ ರೂಪವನ್ನು ನೋಡುವುದೊಂದೇ ತಡ! ಅವರು ನಿನ್ನ ದಾಸ್ಯವನ್ನೇ ಸ್ವೀಕರಿಸುವರು. ಅಲ್ಲಿಯ ವರೆಗೆ ನವಮಾಲತಿ ಯಂತೆ ಕೋಮಲವಾಗಿರುವ ನಿನ್ನ ತನುವನ್ನು ಚಿಂತೆಗೀಡುಮಾಡಿ ಕುಂದಿಸ ಬೇಡ !

**ದಮಯಂತಿ:**—ಚಂದ್ರಾ, ಇದು ವಿನೋದದ ಸಮಯವೇ ?

ಧಾಟಿ:—ಮಧುರ ಕಿತೀ ಕುಸುಮ ಗಂಧ ಸುಟಲಾ.

ಬರುವನೇನೆ ಮೋಹನಾಂಗ-ನಿರದೆ ॥ ಪಲ್ಲ ॥
ಪ್ರಿಯನ ಸುಹಾಸದ ಸೂಸುವ ಚಂದ್ರಿಕೆ ।
ನಯನೋತ್ಸವಮಾಗೆ ॥
ಭಯವಿಹುದೇನೀ ನವಮಾಲತಿಗೆ ?
ಬಯಕೆ ಇದೇ ಭ್ರಮವೆ !!! ॥ ೧ ॥

**ಚಂದ್ರಾ:**—ದಮಯಂತೀ, ಸುಮ್ಮನಿರು ಇನ್ನು ! ಅಲ್ಲಿ ನೋಡಿ ದಿಯಾ? ವಸುಮತಿ ಮಂಜುಘೋಷೆಯರು ಬಂದರು.

**ದಮಯಂತಿ:**—ಅಹುದಲ್ಲ ! ಈ ಸಮಯಕ್ಕೆ ಅವರು ಬಂದದ್ದು ಒಳಿತೇ ಆಯಿತು. ವಸುಮತಿಯಂತೂ ಮಾತಿನ ಜಾಣೆಯು. ಅವಳಾಡುವ

ನಾಲ್ಕು ವಿನೋದದ ಮಾತುಗಳನ್ನಾದರೂ ಕೇಳಿ ನನ್ನ ಸಂತಾಪವನ್ನು ಮರೆಯುವೆನು.

(ವಸುಮತಿ ಮಂಜುಘೋಷೆಯರು ಪ್ರವೇಶಿಸುತ್ತಾರೆ.)

**ವಸುಮತಿ:**—ಯಾಕೆ ದಮಯಂತಿ ಅಮ್ಮಣ್ಣಿಯವರೇ, ಕ್ಷೇಮವಷ್ಟೇ?

**ಮಂಜು:**—ದಮಯಂತೀ, ಮಾತಾಡಲೊಲ್ಲಿ ?

**ದಮಯಂತಿ**—ಬನ್ನಿರಿ ಗೆಳತಿಯರೇ ! ಯಾಕೋ ದರ್ಶನವನ್ನು ಅಪರೂಪವಾಗಿ ಮಾಡಿರುವಿರಿ ?

**ಮಂಜು:**—ಅದೇಕೆ ! ಕೂಡಿದಾಗ ಬಂದೇ ಬರುತ್ತೇವೆ. (ದಮಯಂತಿಯ ಮುಖವನ್ನು ನಿರೀಕ್ಷಿಸಿ) ದಮಯಂತೀ, ನಿನ್ನ ಕಾಂತಿಮಯವಾದ ಮುಖವು ಪ್ರಾತಃಕಾಲದ ಚಂದ್ರನಂತೆ ಬಾಡಿರುವುದೇಕೆ ? ಅಪರೂಪದ ಪದಾರ್ಥವನ್ನು ಕಳಕೊಂಡವರಂತೆ ಇವಳ ಮುಖವು ಹೇಗೆ ಇಳಿದು ಹೋಗಿದೆ ನೋಡಿರಿ !

**ವಸುಮತಿ:**—ಅಂತಃಪುರದ ಸುತ್ತಲು ಭದ್ರವಾದ ಕಾವಲು ಇರಲು ರಾಜಕನ್ನೆಯು ಜಡಪದಾರ್ಥಗಳನ್ನು ಕಳಕೊಳ್ಳುವುದು ಹೇಗೆ ? ಯಾವನೋ ಕುಶಲನಾದ ಕಳ್ಳನು ಇವಳ ಹೃದಯವನ್ನೇ ಕದ್ದುಕೊಂಡು ಹೋಗಿರುವಂತೆ ತೋರುತ್ತದೆ !

**ಮಂಜು:**—ಅಹುದೇನು ದಮಯಂತೀ ?

**ಚಂದ್ರಾ:**—ವಸುಮತಿ, ನೀನೊಳ್ಳೇ ಧೂರ್ತೆಯು. ಅನ್ಯರ ಹೃದ್ಗತವನ್ನು ಸಂಗಡಲೇ ಕಂಡುಕೊಳ್ಳುವಿ !

**ದಮಯಂತಿ:**—ವಸುಮತಿಯು ಧೂರ್ತಳಿದ್ದಷ್ಟೆಯೋ ಚಂದ್ರಾ, ನೀನು ಮುಗ್ಧೆಯು ! ಯಾರ ಹೃದ್ಗತವನ್ನು ಕಂಡಳವಳು ?

**ವಸುಮತಿ:**—ಮಂಜುಘೋಷೆ, ಏನೋ ತಗಲು ಇದೆ ನೋಡು !!

**ಮಂಜು:**—ಚಂದ್ರಾವಲಿ, ನೀನು ದಮಯಂತಿಯ ಗುಟ್ಟಿನವಳು. ಏನಿದ್ದ ರಹಸ್ಯವನ್ನು ನಮ್ಮ ಮುಂದೆ ಹೇಳಲಿಕ್ಕೆ ಅಡ್ಡೀ ಏನು ?

**ಚಂದ್ರಾ:**—ನಿಮ್ಮಂಥ ಜೀವದ ಗೆಳತಿಯರ ಮುಂದೆ ಹೇಳದಿದ್ದರೆ ಇನ್ನಾರ ಮುಂದೆ ಹೇಳಬೇಕು ? ಗಂಧರ್ವಕುಮಾರಿಯಾದ ಮಂಜುಳೆಯು

ನಿಷಧ ದೇಶದ ನಲರಾಜರ ಚಿತ್ರವನ್ನು ತಂದು ದಮಯಂತಿಗೆ ಕೊಟ್ಟು ಹೋದದ್ದು ನಿಮಗೆಲ್ಲ ಗೊತ್ತೇ ಇರುವದಷ್ಟೆ ?

**ವಸುಮತಿ:**—ಹಾಂ! ಹಾಂ!! ಇವಳು ಮನಸಿಜನ ಹೂಬಾಣಗಳ ಪೆಟ್ಟಿನಿಂದ ಹೀಗೆ ವ್ಯಾಕುಲಳಾಗಿರುವಳೇನು ?

**ಮಂಜು:**—ಸಂದೇಹವೇನು ? ಇದಕ್ಕೆ ಇವಳ ದೇಹವೇ ಸಾಕ್ಷಿ!

ಧಾಟಿ:—ಮುನಿಸು ಮಾಡುವರೇನೆ ವನಜದಳಾಕ್ಷಿ.

ಮನಸಿಜಾತನ ತಾಪ-ವಸು ತಾಳವಾಗಿ ॥
ವನರುಹ ಕೋಮಲ-ತನು ಬಾಡಿಹುದು ನೋಡೆ । ಪಲ್ಲ ॥
ಬಿಳಿದಾಗಿಹುದು ಕಾಂತಿ ಬಳುಕುತಿಹುದು ನಡು ॥
ನಳಿತೋಳ್ ಜೋಲ್ದಿಪವೀ ಜೊಳ್‌ಮೊಲೆಗಳ ನೋಡು ॥
ಬಸಿದಿವೆ ಕದಪುಗಳ್ ಉಸುರಿಗೆ ಕೆಂದುಟಿ ॥
ನಸುಗೆಂಪಿಗಿಳಿದಿಪ ಹೊಸಪರಿಯನು ನೋಡೆ ॥ ೨ ॥

**ವಸುಮತಿ:**—ಹೇಗೆ ಹೊರಬಿದ್ದಿತು ನೋಡು ದಮಯಂತೀ! ಕಸ್ತೂರಿಯನ್ನು ಬಚ್ಚಿಟ್ಟುಕೊಂಡರೆ ಅದು ಅರಸಿನ ಮಗಳಾದ ನಿನಗೆ ಅಂಜಿ ಸುಮ್ಮನೆ ಇರಬಲ್ಲದೆ ?

**ದಮಯಂತಿ:**—ವಸುಮತಿ, ಪಶುಗಳ ಘ್ರಾಣೇಂದ್ರಿಯವೇ ತೀಕ್ಷ್ಣವೆಂದು ನಾನು ತಿಳಿದಿದ್ದೆನು.

**ವಸುಮತಿ:**—ಅಹುದೇನು ರಾಜಕುಮಾರಿಯರೆ ?

**ಮಂಜು:**—ದಮಯಂತೀ, ನಿನ್ನ ರಹಸ್ಯವನ್ನು ಊಹಿಸಿಕೊಳ್ಳದಿದ್ದರೆಯೇ ನಾವು ಪಶುಗಳಾಗುತ್ತಿದ್ದೆವು.

**ವಸುಮತಿ:**—ಮಂಜುಘೋಷೆ, ನಾವು ಇವಳ ಅಂತರಂಗವನ್ನು ಊಹಿಸಿದರೂ ಪಶುಗಳು! ಊಹಿಸದಿದ್ದರೂ ಪಶುಗಳು! ರಾಜರ ಮಕ್ಕಳು ಹೇಗೆ ಮಾತನಾಡಿದರೂ ಚಂದ! ಇಲ್ಲಿಗೆ ಬಂದವರೇ ನಾವು ಹುಚ್ಚರು! ನಡೆ!

**ದಮಯಂತಿ:**—ವಸುಮತಿ, ನೀನು ಕಡ್ಡಿಯನ್ನೊಯ್ದು ಗುಡ್ಡ ಮಾಡುವಿ. ಒಂದು ವಿನೋದದ ಮಾತಾಡಿದ್ದಕ್ಕೆ ಇಷ್ಟೇ ? ಇದಕ್ಕೇನು ತಪ್ಪು ದಂಡವನ್ನು ಹೇಳುವಿ ಹೇಳು.

**ವಸುಮತಿ:**—(ನಕ್ಕು) ಹಾಗಾದರೆ ನಲರಾಜರ ಚಿತ್ರವನ್ನು ನಮಗೆ ತೋರಿಸು ಸುಮ್ಮನೆ !

**ಚಂದ್ರಾ:**—ಅದನ್ನು ದಮಯಂತಿಯು ತನ್ನ ಸೆರಗಿನಲ್ಲಿ ಬಚ್ಚಿಟ್ಟು ಕೊಂಡಿರುವಳು ನೋಡಿರಿ !

**ಮಂಜು:**—(ದಮಯಂತಿಯ ಸೆರಗಿನೊಳಗಿಂದ ಚಿತ್ರವನ್ನು ಸೆಳೆದು) ವಸುಮತಿ, ಇವಳು ಈ ಚಿತ್ರವನ್ನು ಎಷ್ಟು ಜೋಕೆಯಿಂದ ಬಚ್ಚಿಟ್ಟುಕೊಂಡಿದ್ದಳು ನೋಡು !

**ವಸುಮತಿ:**—ಹೀಗೇಕೆ ಇದನ್ನು ಬಚ್ಚಿಟ್ಟುಕೊಂಡಿದ್ದಿ ಗೆಳತೀ ? ನಾವೆಲ್ಲರೂ ಲಗ್ನವಾದವರೇ ಇರುತ್ತೇವೆ. ನಿನ್ನ ಪ್ರಿಯತಮನನ್ನು ನಾವು ಅಪಹರಿಸುತ್ತಿದ್ದಿಲ್ಲ ಕಂಡಿಯಾ ?

**ದಮಯಂತಿ:**—ವಸುಮತೀ, ನೀನು ಮರ್ಯಾದೆಯನ್ನು ಬಿಟ್ಟು ಬಿಟ್ಟೆ !

**ಚಂದ್ರಾ:**—ವಸುಮತಿಯು ಆಡಿದ್ದರಲ್ಲಿ ವಿಪರೀತವೇನೂ ಇಲ್ಲ. ವಿನೋದವನ್ನು ಬೆರೆಸದೆ ಅವಳಿಗೆ ಮಾತೇ ಆಡಲಿಕ್ಕೆ ಬರುವುದಿಲ್ಲ. ಸ್ವಭಾವಕ್ಕೆ ಔಷಧವೆಲ್ಲಿ ?

**ಮಂಜು:**— (ಚಿತ್ರವನ್ನು ನೋಡಿ) ರೂಪವು ಚೆನ್ನಾಗಿದೆ. ಆದರೆ ಇಷ್ಟರಿಂದಲೇ ನೀನು ಹೀಗೆ ಭ್ರಾಂತಳಾದಿಯಾ ದಮಯಂತೀ ?

**ದಮಯಂತಿ:**— ಮಂಜುಘೋಷೆ, ಆ ಚಿತ್ರದಲ್ಲಿ ಇಂದ್ರಜಾಲವೇ ತುಂಬಿರುವಂತೆ ಕಾಣುತ್ತದೆ. ಪತ್ಯಕ್ಷವಾಗಿ ಅವರನ್ನು ನೊಡಿದವರ ಗತಿ ಏನಾಗುವದೋ ಕಾಣೆನು :

ಧಾಟಿ:—‘ ಮನಮೋಹನ ರೂಪವನೀಕ್ಷಿಸಿ ’

ನಯನೋತ್ಸವಮಾಗಿಹ ಚಿತ್ರವ ನೋಡಲು ಮೋಹವಾಯಿತೆ
ಮನಕಿದು ಮೋಹವಾಯಿತೆ ॥ ಪಲ್ಲ ॥
ಪ್ರೇಮದಿ ಸವಿಮಾತಾಡುತೆ ಕಾಂತನು ಭಾಮಿನಿ
ಸತಿಯಾಗೆನೆ ನಯದಿ ॥ ೧ ॥

ಪ್ರಮದೆಯ ಮನದೊಳು ಹರುಷದ ಸೂರೆಯದಾಗದೇ ಸಖಿ
ಸೂರೆಯದಾಗದೇ ಸಖಿ ॥ ೨ ॥

**ಚಂದ್ರಾ:**—ಏನೇನು ದಮಯಂತೀ ?

**ವಸುಮತಿ:**—ತಿಳಿಯಲಿಲ್ಲೇ ! ನಾನು ಹೇಳುತ್ತೇನೆ ಕೇಳು :— “ಪ್ರೇಮದಿ ಸವಿಮಾತಾಡುತೆ ಕಾಂತನು” (ಎಂದವಳೇ ಹಾಃ ಹಾಃ ಹಾಃ ಎಂದು ನಗುತ್ತಾಳೆ)

**ಮಂಜು:**— (ದಮಯಂತಿಯ ಮುಂದೆ ನಿಂತು) “ಭಾಮಿನಿ ಸತಿಯಾಗೆನೆ ನಯದಿ ”

**ದಮಯಂತಿ:**—ತೆಗೆಯಿರೆ ! ಏನು ಹುಚ್ಚುಚ್ಚು ಬಡಿಯುವಿರಿ !

**ವಸುಮತಿ:**—ಮಂಜುಘೋಷೆ, ನೀನು ಬಲು ಹುಚ್ಚುಚ್ಚು ಬಡಿಯುವಾಕೆ !

**ಚಂದ್ರಾ:**—ನೀನೇನು ಕಡಿಮೆಯಾಕೆ ವಸುಮತಿ ?

**ದಮಯಂತಿ:**—ಚಂದ್ರಾವಲಿ, ಇವರಿಗೇನು ? ವಿನೋದವೇ ಆಗಿದೆ !

**ವಸುಮತಿ:**—ವಿನೋದವಾಗಲಿಕ್ಕಿಲ್ಲವೆ? (ಹಾಃ ಹಾಃ ಹಾಃ ನಗುತ್ತಾಳೆ)

**ಮಂಜು:**—ಸಾಕುಮಾಡಿನ್ನು ವಸುಮತಿ ? ಮನೆಗೆ ಹೋಗುವ ಹೊತ್ತಾಯಿತು ನಡೆ, ಹೋಗೋಣ.

**ದಮಯಂತಿ:**—ಎಲ್ಲಿಯ ಹೊತ್ತೆ ? ಇದೇ ಈಗ ಬಂದಿರುವಿರಿ !

**ವಸುಮತಿ**—ನಿನಗೇನು ದಮಯಂತೀ ? ಅತ್ತೇಮನೆಯ ತೊತ್ತುಗಳು ನಾವು !

**ದಮಯಂತಿ:**—ಅವ್ವಯ್ಯಾ ! ಯಾರಾದರೂ ಅಹುದೆಂದಾರು ನೋಡು !!!

**ಮಂಜು:**— ಆದರೇನಾಯಿತು ? ಬೇಗನೆ ಮನೆಗೆ ಹೋಗುವದು ಒಳ್ಳೇದು, ನಮ್ಮವ್ವಾ !

**ದಮಯಂತಿ:**—ಆಹಹಾ ! ಮನೆಯಲ್ಲಿ ಜೀವ ಎಳೆಯುತ್ತದೆ, ಏನು ಮಾಡುವಿರಿ !!

**ವಸುಮತಿ:**—ದಮಯಂತೀ, ಈ ಮಾತಿನ ಕಡಕ್ಕೆ ಕಡ ಎಂದಾದರೂ ತೀರೀತು, ಚಿಂತೆ ಮಾಡಬೇಡ. ಅಷ್ಟಣೆ ಕೊಡು ಇನ್ನು.

**ದಮಯಂತಿ:**—ನಿಲ್ಲಿರಿ ! ಕುಂಕುಮ ಹಚ್ಚುತ್ತೇನೆ. (ಕುಂಕುಮ ತಂದು ಅವರಿಬ್ಬರಿಗೂ ಹಚ್ಚುತ್ತಾಳೆ).

(ತೆರೆ)

## ನಾಲ್ಕನೆಯ ಪ್ರವೇಶವು

ಸ್ಥಳ:—ರಾಜನ ವಿಹಾರೋಪವನವು

(ರಾಜನೂ ವಿದೂಷಕನೂ)

**ರಾಜಾ:**—ಉತ್ಸವಮೂರ್ತಿ, ನೀನು ಹೇಳಿದಂತೆ ಈ ಉಪವನವು ಬಹು ಪ್ರೇಕ್ಷಣೀಯವಾಗಿದೆ! ಇಲ್ಲಿ ನೋಡು! ಸೇನಾನಾಯಕನಿಗೆ ಪ್ರಣಾಮ ಮಾಡಲು ನಿಂತಿರುವ ಸೈನಿಕರ ಸಾಲುಗಳಂತೆ, ಈ ನಡುಬೀದಿಯ ಎರಡೂ ಬದಿಗಿದ್ದ ಗಿಡಗಳ ಸಾಲುಗಳು ಹೇಗೆ ಕಂಗೊಳಿಸುತ್ತವೆ! ಲತೆಗಳಾದರೂ ಹೇಗೆ ಮನೋಹರವಾಗಿ ಕಾಣುತ್ತವೆ ನೋಡು!

(ರಾಗ—ಕೇದಾರ. ತಾಲ—ಏಕ್ತಾ.)

ಲೋಭನೀಯವಾದ ಲತೆಯ ಶೋಭೆ ನೋಡಿ ಮೋಹವಹುದು ॥ಪ॥
ಲತೆಯೊಳಿಲ್ಲಿ ಸುರಿವ ಕುಸುಮ ತತಿಯು ಕೂಡಿ ತೋರುತಿಹುದು ।
ಚತುರೆ ಮದನ-ಲೇಖ ಬರೆದು ಹಿತದಿ ಕಾಂತಗೀವ ತೆರದಿ ॥ ೧ ॥
ಕುಂದಲತೆಯು ಪ್ರೇಮಭರದಿ ಹೊಂದಿಕೊಳ್ಳಲಾ ತರುವನು ।
ಬಂದುದೇನಶೋಕನೆಂಬ ಅಂದವಾದ ನಾಮವದಕೆ ॥ ೨ ॥

**ವಿದೂಷಕ:**—ಮಿತ್ರಾ, ಇಲ್ಲಿ ನೋಡಿದೆಯಾ? ಭಸ್ಮಾಂಗನಾದ ಯೋಗಿಯೊಬ್ಬನು ಸಂಸಾರಿಕರನ್ನು ಬಿಟ್ಟು ದೂರ ಸಿಡಿದು ನಿಂತಿರುವಂತೆ ಆ ಔದುಂಬರವು ಒತ್ತಟ್ಟಿಗೆ ಮೂಲೆಯಲ್ಲಿ ಹೇಗೆ ನಿಂತಿದೆ ನೋಡು!

**ರಾಜಾ:**—ಅಲ್ಲಿ ಯೋಗಿಯು ಹಾಗೆ ನಿಂತಿರಲು ಇತ್ತ ನೋಡು, ಮಿತ್ರಾ ಏನು ಚಮತ್ಕಾರ ನಡೆದಿದೆ! ಈ ಪ್ರಫುಲ್ಲಿತವಾದ ಮಾಧವೀಮಂಟಪದ ಮೇಲೆ ಮಾವಿನ ಟೊಂಗೆಯು ಗಾಳಿಗೆ ಅಲ್ಲಾಡಿ ಹೇಗೆ ವಿಲಕ್ಷಣವಾಗಿ ತೋರುತ್ತದೆ!

ಧಾಟಿ:—'ಕರೆದಾಳೊ ಬಾರೊ ಕಾಮಿನಿ.'

ರಮಣಿಯೊಲ್ ತೋರೆ ಮಾಧವೀ। ರಮಣನಾಮ್ರಂ ॥ ಪ ॥
ಲೋಲೆ ತಾನು ಸಂಕೇತ ಸ್ಥಾನದಲಿ ।
ಕೇಲಿಗೆಂದು ಬರೆ, ಕಾಂತನಾಗ ಬಹು ॥
ಲೀಲೆ ತೋರಿ ಮುಖ ಚುಂಬಿಸುತಿರೆ ಪ್ರತಿ. ।
ಕೂಲನಾದ ಗಡ ವಾಯು ಕುಮತಿಯು ॥ ೧ ॥

**ವಿದೂಷಕ:**—ಎಲ್ಲಿ ನೋಡಿದರೂ ರಮಣಿ ರಮಣರ ಏಕಾಂತ ಸಂಕೇತ ಗಳಿಗೆ ವಿಘ್ನಗಳೇ ಬಹಳ !

**ರಾಜಾ:**—ಹೀಗೇನು !! (ಎಂದು ಮುಗುಳುನಗೆ ನಗುತ್ತಾನೆ)

**ವಿದೂಷಕ:**—ಮಿತ್ರಾ, ಇಲ್ಲಿ ನೋಡುಬಾ ! ವಾರಾಂಗನೆಯು ವಿಟ ನನ್ನು ಸಮಗ್ರವಾಗಿ ತನ್ನ ಜಾಲದಲ್ಲಿ ಹಿಡಿದಿರುವಂತೆ ಈ ಬಳ್ಳಿಯು ಗಂಧದ ಮರವನ್ನು ಹೇಗೆ ಸುತ್ತಿಕೊಂಡಿದೆ !

**ರಾಜಾ:**—ಸಾಧು ! ಮಿತ್ರಾ ನೀ ನೊಳ್ಳೇ ಮಾರ್ಮಿಕನು. ಗಂಧವುಳ್ಳವ ನನ್ನು ವಾರಾಂಗನೆಯು ಎಂದಿಗಾದರೂ ಬಿಟ್ಟಾಳೆ ? ನಡೆಯಿನ್ನು, ಸರೋವರದ ಕಡೆಗೆ ಹೋಗೋಣ ! (ಅತ್ತ ಹೋದಂತೆ ನಟಿಸುತ್ತಾರೆ)

**ವಿದೂಷಕ:**—ಅಬ್ಬಬ್ಬ !! ನೋಡಿದೆಯಾ ಮಿತ್ರಾ ! ದೈತ್ಯರಾಜನಿ ಗಾಗಿ ಸುರೆಯಿಂದ ತುಂಬಿಟ್ಟ ವಿಸ್ತಾರವಾದ ಪಾನಪಾತ್ರದಂತೆ ಈ ಸರೋವರವು ಬಹು ಅಗಾಧವಾಗಿ ತೋರುತ್ತದೆ !

**ರಾಜಾ:**—ಭಲೆ ! ಮಿತ್ರಾ, ನಿನ್ನ ಕಲ್ಪನೆಯು ಬಹು ಚಮತ್ಕಾರ ವಾದದ್ದು. ಈ ನಿರ್ಮಲವಾದ ಸರೋವರವೂ ಸುತ್ತಲೂ ಬಹು ರಮ್ಯವಾಗಿ ತೋರುತ್ತಿರುವ ವನಶೋಭೆಯೂ ಕೂಡಿ ಹೇಗೆ ಚಿತ್ತಾಕರ್ಷಕವಾಗಿ ತೋರು ತ್ತವೆ ನೋಡು !

ಧಾಟಿ:—'ಸಿಟ್ಟು ಬಾರದೆ ಎನಗೆ ಸಿಟ್ಟು ಬಾರದೆ.'

**ಛಾಯೆ ನೋಡಿದ್ಯೆ ವಿಮಲ ತೋಯ ರಾಶಿಯೊಳ್ ॥ ಪ ॥**
**ತೋಯ ರಾಶಿಯೊಳು ವನದ ।**
**ಶ್ರೀಯು ಬಿಂಬಿಸಿರುವ ನಿರುಪ. ॥**
**ಮೇಯವಾದ ಶೋಭೆ ಮನಕೆ ।**
**ಧ್ಯೇಯವಾಗಿ ತೋರುತಿಹುದು ॥ ೧ ॥**
**ಸುಂದರಾಂಗಿ ವೋದ ತಳೆದು ।**
**ಚಂದದಲಾಭರಣ ತಾಳ್ದು ॥**
**ಮುಂದಹಾಸದಿಂದ ಮುಕುರ ।**
**ತಂದು ಮುಖವನೋಳ್ಪಳೇನೊ ॥ ೨ ॥**

**ಆ ನನ್ನ ಹೃದಯರಮಣಿಯ ಚಿತ್ರಪಟವನ್ನಿಲ್ಲಿ ತಾ !**

ವಿದೂಷಕ:—ಅದನ್ನೇನು ಮಾಡುತ್ತೀ ಬಿಡು ! ನೋಡಿ ನೋಡಿದ ಹಾಗೆ ನಿನ್ನ ಸಂತಾಪವು ಹೆಚ್ಚಾಗುವದೆಂದು ನೀನೇ ಹೇಳುತ್ತಿರುವಿಯಲ್ಲವೆ ?

ರಾಜಾ:—ಇಲ್ಲದ ಶಾಸ್ತ್ರ ಹೇಳಬೇಡ, ಸುಮ್ಮನೆ ಆ ಚಿತ್ರವನ್ನು ನನ್ನ ಸ್ವಾಧೀನ ಮಾಡು ! (ಚಿತ್ರ ನೋಡುತ್ತ)

'ಧಾಟಿ:—ಪಾನಿ ಭರೇಲೀ ಕೋನ ಅಲುಬೇಲೀ'

ಪ್ರಾಣಸಮಾನೆ, ನಿನಗಿರದೇನೆ ದಯೆ । ಮನೋಜ್ಞೆ ‖ ಪ ‖
ಈ ನಗೆಮೊಗದೊಳ್ ಪ್ರೇಮವಿಲಾಸವು ।
ತಾನೆ ವಿರಾಜಿಪುದಿದು ಸಟೆಯೇನೆ, ಪ್ರಿಯೆ ‖ ೧ ‖

ವಿದೂಷಕ:—ಓಹೋ ! ಮಿತ್ರಾ, ಸುಂದರವಾದ ಪಕ್ಷಿಗಳೆರಡು ಇಲ್ಲಿ ಗಿಳಿದು ಬರುವಂತೆ ಕಾಣುತ್ತವೆ ನೋಡು !

ರಾಜಾ:—ಹಂಸಗಳಿವು !

ನವಮಾಣಿಕ್ಯದ ಚಂಚುವು ।
ಪವಳದ ಕಾಲ್ ಪದುಮರಾಗದಾ ಲೋಚನಗಳ್ ‖
ಧವಲ ಸ್ಫಟಿಕದ ತನುವಿರೆ ।
ಭುವನದಿ ವೈಚಿತ್ರ್ಯವಾದ ಸತ್ವಗಳಿವು ಕಾಣ್ ‖ ೧ ‖

ಆ ಗಂಧರ್ವನು ಹೇಳಿದ ಹಂಸಗಳು ಇವೇ ಇರಬಹುದೇನು ?

ವಿದೂಷಕ:— (ಆಲಿಸಿ) ಕಿರಿಗೆಜ್ಜೆಗಳ ಸಪ್ಪಳವಾಗುತ್ತದೆ. ಇವು ಸಾಕಿದ ಹಂಸಗಳು. ಅಲ್ಲಿ ನೋಡು ಮಿತ್ರಾ, ಅವು ಸರೋವರದ ಕಮಲಗಳ ಮೇಲೆ ಕುಳಿತುಕೊಂಡವು !

ರಾಜಾ:—ನಡೆ ! ಉತ್ಸವಮೂರ್ತೀ, ಅವುಗಳನ್ನು ಹಿಡಿಯೋಣ ಬಾ !! (ಈರ್ವರೂ ಹಂಸಗಳನ್ನು ಹಿಡಿಯುವುದಕ್ಕಾಗಿ ಓಡಾಡುತ್ತಾರೆ. ರಾಜನು ಹಂಸಿಯನ್ನು ಹಿಡಿಯುತ್ತಾನೆ).

ವಿದೂಷಕ:—ಆಹುದು ಮಗಳೆ ! ಒಳಿತಾಗಿ ಸಿಕ್ಕಿ !! ಮಿತ್ರಾ, ನೀನಿದನ್ನು ಒಳ್ಳೇ ಜಾಣ್ಮೆಯಿಂದ ಹಿಡಿದಿ ! ಇದರ ಕೊರಳಲ್ಲಿ ಏನೋ ಕಟ್ಟಿದೆ ನೋಡು !

ರಾಜಾ:—ಮುತ್ತಿನ ಸರದಲ್ಲಿ ಕಟ್ಟಿದ ಪತ್ರಿಕೆಯಿರುವದು ! ಇದು ಪ್ರಣಯಪತ್ರಿಕೆಯೇ ಇರಬಹುದೇನು ?

**ವಿದೂಷಕ:**—ಅಂ ! ಓದಿ ನೋಡು ಮೊದಲು !

**ರಾಜಾ:**—ಓದುತ್ತೇನೆ ತಡೆ ಮಿತ್ರಾ! (ಪತ್ರವನ್ನು ಬಿಚ್ಚಿ ಓದುತ್ತಾನೆ)

**ವಿದೂಷಕ:**—ಮಿತ್ರಾ, ನಿನ್ನ ಕೈಬೆರಳುಗಳು ಹಾಗೆ ನಡುಗುತ್ತವೇಕೆ ?

**ರಾಜಾ:**— (ತಿರಸ್ಕಾರದಿಂದ) ಉತ್ಸವಮೂರ್ತೀ, ಈ ಪತ್ರವನ್ನು ಓದುವ ವರೆಗೆ ದಯಮಾಡಿ ಸುಮ್ಮನಿರುವಿಯಾ ?

**ವಿದೂಷಕ:**—ಹಾಗೇ ಆಗಲಿ; ಮಿತ್ರಾ, ನನಗೂ ಕೇಳಿಸುವಂತೆ ಓದುವಿಯೋ ಇಲ್ಲವೋ ? ದಮಯಂತಿಯ ಪತ್ರವೇನು ?

**ರಾಜಾ:**—(ನಕ್ಕು) ಅಹುದು. ಕೇಳು !

**ಧಾಟಿ:**—'ತರುಣೀಯ ಮಾತಿಗೆ.'

ವಿನತಿಯನಾಲಿಸೊ ಮನಮೋಹನಾ ॥ ಪಲ್ಲ ॥
ನಲಿನಿಯು ಸೀಳುತೆ ಬಿಸನ ಸಾರಸನು ॥
ಸೆಳೆವ ತೆರದಲೆನ್ನ ಮನವ ಸೆಳೆದಿ ರಾಜೇಂದ್ರ ॥ ೧ ॥
ಸ್ಮರತಾಪದಿಂದೆ ನಾಂ ಬಳಲಿ ಜೀವಿಸೆನು ॥
ಪರಿಹರಿಸಲು ಬೇಗ ರಿಪುದಮನನೆ ಬಾರೆಂಬೆ ॥ ೨ ॥
ವಿಧು ಪ್ರೇಮ ತೋರುತೆ ಕುಮುದ ರಾಜಿಯನು ॥
ಮುದಿಸುವ ತೆರದೆನ್ನ ಕರವ ಪಿಡಿದು ಸಂತೈಸು ॥ ೩ ॥

ಮಿತ್ರಾ, ಎಂಥ ಲಲಿತವಾದ ಅರ್ಥಬಂಧವಿದು ಕೇಳಿದಿಯಾ ?

**ವಿದೂಷಕ:**—ಚೆನ್ನಾಗಿ ಬರೆದಿದ್ದಾಳೆ.

**ರಾಜಾ:**—ಅಕ್ಷರಗಳಂತೂ ಮುತ್ತುಗಳಾಗಿವೆ ನೋಡಬಾರದೆ !

**ವಿದೂಷಕ:**—ನಾನಂತೂ ಹೇಳಿಕೇಳಿ ಅಕ್ಷರಶತ್ರುವು ! ಶತ್ರುಗಳಾದ ಈ ಅಕ್ಷರಗಳ ಸ್ತುತಿಯನ್ನು ನಾನು ಮಾಡುವೆನೆ ? ಆದಿರಲಿ, ಈ ಹಂಸಿಯ ಕೊರಳಲ್ಲಿ ನೀನೊಂದು ಪ್ರತ್ಯುತ್ತರವನ್ನು ಕಟ್ಟಿ ಕಳಿಸುವಿಯಷ್ಟೆ ?

**ರಾಜಾ:**—(ಕಮಲದಳದ ಮೇಲೆ ಪತ್ರವನ್ನು ಬರೆದು ಹಂಸಿಯ ಕೊರಳಿನಲ್ಲಿ ಕಟ್ಟಿ)

## ರಾಗ—ಭೀಮಪಲಾಸ.

ಧಾಟಿ:—‘ಮೂರ್ತಿಮಂತ ಭೀತಿ ಉಭೀ ಮಜಸಮೋರ’

ದೈವವಂತಿಯೊಂದು ಹಂಸಿ ನೀನು ಮೋಹನಾಂಗಿಯು ।
ದಿವ್ಯರೂಪ ಕಾಂತಿಗಳನು ನೋಡಿ ಧನ್ಯಳಾಗುವಿ ॥
ಭಾಗ್ಯಹೀನ ನಾನು ಮಾತ್ರ ವಿರಹತಾಪ ತಾಳದೆ ।
ಹೀಗೆ ದೀನನಾದೆನೆಂಬ ವಾರ್ತೆ ಪೇಳು ಕಾಂತೆಗೆ ॥

( ತೆರೆ )

## ಐದನೆಯ ಪ್ರವೇಶವು

ಸ್ಥಳ:—ಕುಂಡಿನಪುರದ ಪ್ರಮದವನವು.

(ದಮಯಂತಿಯೂ ಸಖೀಜನರೂ)

**ಚಂದ್ರಾವಲಿ:**—ದಮಯಂತೀ, ಈ ಪ್ರಮದವನದ ಮಲಯಮಾರುತ ನಿಂದ ನಿನ್ನ ಸಂತಾಪವು ಕಡಿಮೆಯಾಗಿರುವದಷ್ಟೆ ?

**ದಮಯಂತಿ:**—ಯಾತರಿಂದಲೂ ನನಗೇನೂ ಸುಖವಾಗದು !

ರಾಗ:—ಖಮಾಜ.

ಧಾಟಿ:—' ಮೋಹಿನಿಕೆ ಲಾಗೆ ಸುರತೆ ತೇಹಾರೀ '

ಭ್ರಮಿಪುದೀ ಜಗಮೆಂ ವಿಪರೀತವಾಗಿ । ಸಾಗಿ ॥
ನಂದಿಸುವೀ ಸುರಭಿ ಪವನವು
ಸಂದಹಿಸೆ ಶಿಖಿಯಾಗಿ, ವಿಷವಾಗಿ, ವಿಪರೀತವಾಗಿ ॥

**ಚಂದ್ರಾ:**—ಸಂತಾಪಕ್ಕೆ ಶೀತೋಪಚಾರಗಳೇ ಉಪಾಯವೆಂದು ನಾನು ಕೇಳಿದ್ದೇನೆ. ಹೀಗಿದ್ದು ಶೀತೋಪಚಾರಗಳಿಂದಲೇ ಇವಳಿಗೆ ಸಂತಾಪ ವಾದರೆ ಮಾಡುವದೇನು ?

**ಮಂಜುಘೋಷೆ:**— ಮದನನು ಇವಳ ಸಂತಾಪಕ್ಕೆ ಕಾರಣನು. ಆ ಮದನನ ಬಾಧೆಯನ್ನು ನಿವಾರಿಸಬಲ್ಲ ಜಾಣನಾದ ನಲರಾಜನೆಂಬ ವೈದ್ಯನೇ ಇವಳಿಗೆ ಗತಿಯು.

**ವಸುಮತಿ:**—ಆ ಮದನನೂ ಇವಳ ಹೃದಯದಲ್ಲಿ ವಾಸಮಾಡಿ ಕೊಂಡಿರುವನು. ನಲರಾಜರಾದರೂ ಬಲಾತ್ಕಾರದಿಂದ ಅಲ್ಲಿಯೇ ಸೇರಿರು ವರು. ದಮಯಂತಿಯು ನಲರಾಜರಿಗೆ ಅನುಕೂಲಳಾದರೆ ಮದನನ ಪರಾ ಭವವಾಗುವದು ಕಠಿಣವಾಗಲಿಕ್ಕಿಲ್ಲ.

**ಮಂಜು:**—ನಿನ್ನ ಅಭಿಪ್ರಾಯವೇನು ದಮಯಂತೀ ?

**ದಮಯಂತಿ:**—ಮಂಜುಘೋಷೆ, ಬರಬರುತ್ತ ನಿಮ್ಮ ಚೇಷ್ಟೆಯು ಅನಿವಾರವಾಯಿತು; ಬಿಡಿರೈ, ಏನು ಚಂದವಿದು ?

**ವಸುಮತಿ:**—ಹಾಗಲ್ಲ ಮಂಜುಘೋಷೆ ! ನಮ್ಮ ದಮಯಂತೀದೇವಿಯರಿಗೆ ಕಾಮನ ಗಾಳಿ ಸೋಂಕಕೂಡದು; ಸಖೀಜನರು ವಿನೋದದ ಮಾತುಗಳನ್ನಾಡಕೂಡದು; ಆಯತ್ತವಾಗಿ ಜಗದೇಕವೀರನೂ ನೃಪಕುಲಾವತಂಸನೂ, ಚೆಲುವಚೆನ್ನಿಗರಾಯನೂ ಆದ ಆ ನಲಚಕ್ರವರ್ತಿಯು ಈ ಅಮ್ಮಣ್ಣಿಯವರಿದ್ದಲ್ಲಿ ಬಂದು ವಿನಯದಿಂದ " ದಯಮಾಡಿ ನನ್ನನ್ನು ವರಿಸುವಿರಾ ? " ಎಂದು ಕೇಳಿಕೊಳ್ಳತಕ್ಕದ್ದು ! ತಿಳಿಯಿತೆ ?

**ಚಂದ್ರಾ:**—ದಮಯಂತಿಯು ತನ್ನ ಮನಸ್ಸಿನ ತಾಪವನ್ನು ಸಹಿಸಲಾರದೆ ಈ ಉಪವನಕ್ಕೆ ಬಂದರೆ ಇಲ್ಲಿ ಕೂಡ ನಿಮ್ಮ ಕಾಟವೆ ?

**ವಸುಮತಿ:**—ಇಂಥ ಉಪವನದಲ್ಲಿ ಮದನಸಂತಪ್ತರಾದವರಿಗೆ ಶಾಂತಿಯುಂಟಾದೀತೆ ?

**ಮಂಜು:**—ದಮಯಂತೀ, ನೀನು ಜಾಣಳಾಗಿದ್ದರೆ ಮನ್ಮಥನ ಆಯುಧಾಗಾರವೇ ಆಗಿರುವ ಈ ಪ್ರಮದವನಕ್ಕೆ ಬರಲೇಬಾರದಾಗಿತ್ತು.

ಧಾಟಿ:—' ಶ್ರೀಮಂತ ಪತೀಚೀ ರಾಣಿ.'

ಪ್ರೇಮಾಕುಲೆ ನೀಂ ಬರಬೇಕೆ, ಈ ಮಾರನಾಯುಧಗೃಹಕೆ ॥
ಕಾಮಾರ್ತೆಯಾದೊಡಿಂತೇಕೆ, ನೀ ಮಾಡುವಿ ಕೋಪವ ? ಜೋಕೆ ! ॥
ಅರವಿಂದವಶೋಕದ ಕಲಿಕೆ, ವರಜಾತಿ ಅಮ್ರ ಮಂಜರಿಕೆ ॥
ಸುರನೀಲ ಕಂಜವಿಲ್ಲಿರ್ಕೆ, ಸ್ಮರ ತಂಬುತಿಹನೆ ಬತ್ತಳಿಕೆ ।

(ಸಾಗು) ಈ ಮಾಸಕಧಿಪ ಮಾಧವನು ।
ಭ್ರಮಿಸುತ್ತಿಹ ಮಂದಾನಿಲನು ।
ಸಮವೃತ್ತಿಗೀಯೆ ತಾಪವನು ॥
ಕಾಮಾಗ್ನಿ ಬಾಲೆಗಿರೆ ಸೋಂಕೆ, ಆ ಮಾನಿನಿ ತಾಪಕ್ಕಣಿಕೆ ॥

**ವಸುಮತಿ:**—ಮಂಜುಘೋಷೆ, ನೀಸಿದನ್ನೆಲ್ಲ ಅನುಭವಿಸಿದವಳು. ನಿನ್ನೀ ಅನುಭವಾಮೃತವನ್ನು ಕೃಪೆಯಿಂದ ನಮಗೆ ನೀಡಿದಿ, ಅಷ್ಟೆಸಾಕು !

**ಮಂಜು:**—ವಸುಮತಿ ಅಕ್ಕಾ, ಇದು ನನ್ನ ಅನುಭವವಲ್ಲ ! ತಮ್ಮಿಂದಲೇ ಇದನ್ನೆಲ್ಲ ನಾವು ಕಲಿತುಕೊಂಡದ್ದು. ಹಿರಿ ಅಕ್ಕನ ಚಾಳಿ ಮನೆಮಂದಿಗೆಲ್ಲ !!

**ದಮಯಂತಿ:**—(ನಕ್ಕು) ವಸುಮತಿ, ಹೇಗಾಯಿತೆ ವೈಯ್ಯಾರಿ ? ನಿನ್ನ ಮಂತ್ರ ನಿನಗೇ ತಿರುಗಿತು !

**ವಸುಮತಿ:**—ಔ ನೋಡೆ !! ಅಪ್ಪನ ಮೋರೆ ಹಿಗ್ಗಿ ಎಷ್ಟಡ್ಡಾಗಲ ವಾಗಿದೆ ! ಅಂಥಾದ್ದೇನು ಸಂಭ್ರಮವಾಯಿತೀಗ ?

**ಚಂದ್ರಾ:**—ಯಾಕೆ ಸುಮ್ಮನೆ ವಾಗ್ವಾದವನ್ನು ಬೆಳಿಸುವಿರಿ ? ಸಖಿಯರೆ, ಸರೋವರದ ಕಡೆಗೆ ಹೋಗೋಣ ಬನ್ನಿರಿ.

(ಎಲ್ಲರೂ ಸರೋವರದ ಕಡೆಗೆ ಹೋದಂತೆ ನಟಿಸುತ್ತಾರೆ)

**ಮಂಜು:**—ಬಗೆಬಗೆಯ ಬಣ್ಣದ ಕಮಲಗಳಿಂದೊಪ್ಪುವ ಈ ಸರೋವರದ ಶೋಭೆಯನ್ನು ನೋಡಿದಿರಾ !

ಧಾಟಿ:—'ಆಡಲ್ಹೋಗುಣು ಬಾ, ಬಾಬಾರೊ ರಂಗ'

ಶೋಭೆ ನೋಡಿದಿಯಾ । ಈ ನೀಲಜಲದ ॥ ಪಲ್ಲ ॥
ಲಲನೆ ಜಾಣ್ಮೆಯಿಂದ ತಾನು । ಜಲದ ಸೀರೆಯಲ್ಲಿ ತೆಗೆದ ।
ಹಳದಿ ನೀಲಿ ಕೆಂಪು ಹಸರು । ಬಿಳಿಯ ಕಮಲಜಾಲವೇನೆ ॥ ೧ ॥

**ದಮಯಂತಿ:**—ಚಂದ್ರಾವಲಿ, ಆ ಕಮಲಗಳ ಮೇಲೆ ರಾಜಹಂಸಗಳು ಎಲ್ಲಿಯಾದರೂ ಕುಳಿತಿರುವವೇನು ?

**ವಸುಮತಿ:**—ಒಬ್ಬ ರಾಜಹಂಸನಂತೂ ನಿನ್ನ ಹೃತ್ಕಮಲದಲ್ಲಿಯೇ ಸೇರಿಕೊಂಡಿರುವನು. ಮತ್ತಿನ್ನಾವ ರಾಜಹಂಸಗಳನ್ನು ಹುಡುಕುತ್ತಿರುವಿ ದಮಯಂತೀ ?

**ದಮಯಂತಿ:**—ವಸುಮತಿ, ನಿನ್ನ ಕಾಟವು ಸಾಕುಸಾಕಾಯಿತು ಕಂಡಿಯಾ ? ಎಲ್ಲಿಗಾದರೂ ನಾನೇ ಎದ್ದು ಹೋಗಬೇಕಾಗಿದೆ ! (ಎಂದು ನುಡಿದು ಸರೋವರದ ಬೇರೊಂದು ಸೋಪಾನದಲ್ಲಿ ಹೋಗಿ ಕುಳಿತುಕೊಳ್ಳುತ್ತಾಳೆ)

**ವಸುಮತಿ:**—ಚಂದ್ರಾವಲಿ, ಮಂಜುಘೋಷೆ, ದಮಯಂತಿಯು ಅಲ್ಲಿ ಕುಳಿತು ಏನು ಮಾಡುತ್ತಿರುವಳಾದೀತು ?

**ಮಂಜು:**—ತಾನೇ ಈಗ ಮರಳಿ ಬರುವಳು. ಏನು ಮಾಡುವಳು !

**ವಸುಮತಿ:**—ನಾವೆಲ್ಲರೂ ಮೆಲ್ಲಗೆ ಹೋಗಿ ಅವಳ ಹಿಂದೆ ನಿಂತು ಏನೇನು ಗುಣುಗುಣಿಸುವಳೋ ಕೇಳೋಣ. (ಹಾಗೆ ಮಾಡುತ್ತಾರೆ)

**ದಮಯಂತಿ:**—

ಧಾಟಿ:—'ರಂಗೈಯಾ ಮನೆಗೆ ಬಾರಾನೆ ಸುದತಿ.'

ಇಂತೇಕೆ ತಡೆದುದಾ ಹಂಸೀ ಕಾಣೆನು ॥ ಪಲ್ಲಾ ॥
ಮೋಹನಾಂಗನ ನೋಡಿ ಹಂಸಿಗೆ ।
ಮೋಹ ತುಂಬಿ ಬಂತೆ ? ॥ ೧ ॥
ಸೇರದಾದನೊ ನಾನು ಬಯಸಿದ ।
ಕೋರಿಕೆಯನು ಕಾಂತು ॥ ೨ ॥

**ಸಖೀಜನರು:**—ಇಂತೇಕೆ ತಡೆದುದಾ ಹಂಸೀ ಕಾಣೆವು ॥

(ಎಂದು ಪಲ್ಲಾ ಅನ್ನುತ್ತಾರೆ)

**ದಮಯಂತಿ:**—(ಬೆದರಿ ತಿರುಗಿ ನೋಡಿ) ಏನಿದು ಚೇಷ್ಟೆ? ವಸುಮತಿ ಇದೆಲ್ಲಾ ನಿನ್ನದೇ !

**ವಸುಮತಿ:**—ನಿನಗಾಗಿದೆ ಅನಂಗನ ಚೇಷ್ಟೆ. ನಾವೇನು ಮಾಡೋಣ? ತಂಗೀ, ನೀನು ಹೀಗೆ ಮನಬಿಚ್ಚಿ ಮಂಜುಲವಾಗಿ ಹಾಡುತ್ತಿರಲು ನಾವು ಪಲ್ಲಾ ಅನ್ನದಿದ್ದರೆ ಚಂದವೆ ?

**ದಮಯಂತಿ:**—ಅಹಹಾ, ಜೀವ ಅರೆಯುವದೂ ಚಂದವೇ.

**ವಸುಮತಿ:**—ನಾವೇ ಹಲ್ಲಲ್ಲಿ ನಾಲಿಗೆ ಇಟ್ಟುಕೊಂಡು ಸುಮ್ಮನೆ ಕುಳಿತರಾಯಿತಲ್ಲ ! ಯಾಕೆ ಮಂಜುಘೋಷೆ ?

**ಮಂಜು:**—ಅಷ್ಟೇ ಸರಿ. ಆಡಿ ಅನ್ನಿಸಿಕೊಳ್ಳುವದೇಕೆ ?

**ದಮಯಂತಿ:**—ಹಾಗಲ್ಲ ಮಂಜುಘೋಷೆ ! ಮನಸ್ತಾಪವು ಹೆಚ್ಚಾಗಿರುವದು. ಆದಕ್ಕಾಗಿ ಕಾಡಬೇಡಿರೆಂದು ಬೇಡುತ್ತೇನೆ.

**ವಸುಮತಿ:**—ನಾವಾದರೂ ಏನು ಮಾಡೋಣ ? ನಲರಾಜರು ನಿಷಧದೇಶದಲ್ಲಿ; ನೀನು ಇಲ್ಲಿ ! ಅವರಿಗೆ ಪತ್ರವನ್ನಾದರೂ ಬರೆದು ನಿನ್ನ ಮನೋಗತವನ್ನು ಅರುಹಬಾರದೆ ! ನಿನ್ನಂಥ ತ್ರಿಲೋಕಸುಂದರಿಯು ಈ ವಿದರ್ಭನಗರದಲ್ಲಿ ಇರುವಳೆಂಬುದು ಅವರಿಗೆ ತಿಳಿದರೆ ಸರಿ.

**ಚಂದ್ರಾ:**—ನಿನ್ನೆಯೇ ಪತ್ರವನ್ನು ಬರೆದು ಹಂಸಿಯ ಕೊರಳಿನಲ್ಲಿ ಕಟ್ಟಿ ನಲರಾಜರ ಕಡೆಗೆ ಇವಳು ಕಳಿಸಿದ್ದಾಳೆ.

**ವಸುಮತಿ:**—ಹಾ! ಅದಕ್ಕಾಗಿಯೇ ಇವಳು ಹಂಸಗಳನ್ನು ನೋಡುತ್ತಿರುವಳೇ ? ಪಾಪ ಅವೆಲ್ಲಿಯೂ ಕಾಣಲೊಲ್ಲವಲ್ಲ !

**ದಮಯಂತಿ:**—ಶೀಘ್ರಗತಿಗಳಾದ ಹಂಸಗಳು ಇದುವರೆಗೂ ಬರ ಬಾರದೆಂದರೇನು !!

**ವಸುಮತಿ:**—ದಮಯಂತೀ, ನಿನಗೆ ಆತುರತೆ ಇದ್ದಷ್ಟು ಆ ಹಂಸ ಗಳಿಗೆ ಯಾಕೆ ಇದ್ದೀತು ? ಹೋಗಲಿಕ್ಕೂ ಬರಲಿಕ್ಕೂ ಅವುಗಳಿಗೆ ತಕ್ಕ ಸಮಯವು ಬೇಕೇಬೇಕು.

**ದಮಯಂತಿ:**—ಶಕುಂತಲೆಯು ಭಾಗ್ಯಶಾಲಿನಿಯು ! ಅವಳು ತನ್ನ ಮನೋಗತವನ್ನು ಕಮಲಪತ್ರದ ಮೇಲೆ ಬರೆಬರೆಯುವಷ್ಟರಲ್ಲಿಯೇ ಅವಳ ಹೃದಯರಮಣನಾದ ದುಷ್ಯಂತರಾಜನು ಅಲ್ಲಿಗೆ ಬಂದು ದರ್ಶನವನ್ನು ಕೊಟ್ಟನು. ಭಾಗ್ಯಹೀನಳಾದ ನಾನು ಬರೆದ ಪತ್ರಕ್ಕೆ ಉತ್ತರ ಕೂಡಾ ಬರಬಾರದೆ ?

**ಮಂಜು:**—ಹಾಗಾದರೆ ದಮಯಂತೀ, ಪುಣ್ಯವಂತಿಯಾದ ಆ ಶಕುಂ ತಲೆಯು ರಚಿಸಿದ ಪ್ರೇಮಪ್ರಬಂಧವನ್ನಾದರೂ ಪಠಿಸಬಾರದೆ ? ನಿನಗೂ ಫಲವಾದೀತು !

**ವಸುಮತಿ:**—ಆ ಅರ್ಥಬಂಧವು ಸುಲಲಿತವಾದದ್ದು ! ಹಾಡು ದಮಯಂತಿ, ಕೇಳೋಣ !

**ದಮಯಂತಿ:**—ಆಗಲಿ ! ನೀವು ಹೇಳಿದ್ದು ಕೇಳಬೇಕಲ್ಲ !

ಬಾ ಬಿಡಿಸೊ ಮೋಹನ್ನಾ, ಅಂಗಜ ತಾಪದಿಂದೆನ್ನಾ ॥ ಪ ॥
ಮನಸು ನಿನ್ನದು ತಿಳಿಯದು ಹಗಲಿರುಳು ।
ಮನಸಿಜನುರಿ ತಾಳಲಾರೆನೋ ॥ ೧ ॥

**ವಸುಮತಿ:**—ದಮಯಂತೀ, ಬಹು ಮಂಜುಲವಾಗಿ ಹಾಡಿದಿ !

**ಮಂಜು:**—ಭಾವವ್ಯಂಜಕವಾಗಿ ಹಾಡಿದಿ !!

**ಚಂದ್ರಾ:**—ಒಳ್ಳೇ ಮನಸ್ಸುಗೊಟ್ಟು ಹಾಡಿದಿ !!! ದಮಯಂತೀ ನಿನ್ನಿಷ್ಟಾರ್ಥವು ಕೈಗೂಡಲಿ !

**ಮಂಜು:**—ಅಲ್ಲಿ ನೋಡಿದಿರಾ ! ಆ ಸೋಪಾನದ ತೋರಣಗಳ ಮೇಲೆ ರಾಜಹಂಸಗಳೆರಡು ಹಾರಿ ಬಂದು ಕುಳಿತವು !!

**ದಮಯಂತಿ:**—(ಆನಂದಭರಿತಳಾಗಿ) ಅಹುದಲ್ಲ ! ನಾನು ಕಳಿಸಿದ ಹಂಸಗಳೇ ಅವು !

ಧಾಟಿ:—' ಹ್ಯಾತ್ರಾರಾ ಇಕ್ಷುಕಾನ; ಅವಧೆ. '

ತಂದಿಹಿಯಾ ಶುಭವಾರ್ತೆ ಹಂಸೀ । ಇಂದೆನಗೆ ನೀನು ॥
ಒಂದುಳಿಸದೆ ಕಥಿಸೆ, ಹಂಸೀ ॥ ಇಂದೆನಗೆ...॥ ಪ ॥
ರುಚಿಸಿತೆ ಕಾಂತಗೆ ನಾನು ಪ್ರೇಮದಿ । ಅರುಹಿದ ಮನದೆಣಿಕೆ ॥
ನೀ ಚತುರೆ ಪೇಳ್ ಆತನ ಮನದೊಳ್ । ಆಸ್ಪದವೇ ನನಗೆ ॥
ಹಂಸೀ......॥ ೧ ॥

**ಚಂದ್ರಾ:**—ಈ ಹಂಸಿಯು ಕೊರಳಿನಲ್ಲಿ ರತ್ನದ ಮಾಲೆಯಿಂದ ಕಟ್ಟಿದ ಪತ್ರವಿದೆ !

**ದಮಯಂತಿ:**—(ಪತ್ರವನ್ನು ತೆಗೆದುಕೊಂಡು ಮನಸ್ಸಿನಲ್ಲಿಯೇ ಓದಿ) ವಸುಮತೀ !

**ವಸುಮತಿ:**—ತಿಳಿಯಿತು, ತಿಳಿಯಿತು. ಆನಂದದ ಸುದ್ದಿಯೇ ! ಓದು.

**ದಮಯಂತಿ:**—(ಓದುತ್ತಾಳೆ)

ಧಾಟಿ:—' ಪಪ್ಯೆದಾದ್ರುವಾ ಬುಲಾಯೆ ಪಪ್ಯೆಯಾ ಕೋಯಲೀ. '

ಮನೋಹಾರಿಣಿ ಶುಭಾಂಗಿ, ಪ್ರಿಯೇ ನೀ-ನಾಲಿಸೆ ।
ಬಿಸದದ ನೀರೆ, ಸುಧಾರಾಶಿ ಸಾರೆ, ಮುದವ ತೋರೆ ॥ ಪ ॥
ಸರಳ್‌ಗಳಿಂ-ದೆಸೆದು ಮನೋಜಂ, ಬಾಧಿಪನೇ ತಾಂ, ತಾಳೆನು ನಾನು ॥
ಸ್ಮೇ-ರಾನನೆ, ನಯದಿ ದಯದಿ ಸಲಹೇ, ನಲನ ನೀಂ ಕೇಳ್ ಸು-ಜಾತೆ॥

## ಮೊದಲನೆಯ ಅಂಕ ಸಮಾಪ್ತವು

# ಎರಡನೆಯ ಅಂಕವು

## ಮೊದಲನೆಯ ಪ್ರವೇಶವು

ಸ್ಥಳ—ನೈಮಿಷಾರಣ್ಯ

(ಪರ್ವತ ಮಹರ್ಷಿಗಳೂ ನಾರದರೂ)

**ಪರ್ವತ:**—ತ್ರೇತಾಯುಗದ ನಂತರ ದ್ವಾಪರನು ಲೋಕದಲ್ಲಿ ಧರ್ಮ ನೀತಿಗಳನ್ನು ಚೆನ್ನಾಗಿ ಪರಿಪಾಲಿಸುತ್ತ ಬರುವನು; ಸಂದೇಹವಿಲ್ಲ! ಕೆಲಕಾಲ ವಂತೂ ಲೋಕಕಲ್ಯಾಣದ ಚಿಂತೆ ಮಾಡುವ ಕಾರಣವು ನಮಗಿಲ್ಲ. ಆದ್ದರಿಂದ ನಾವು ನಿಶ್ಚಿಂತರಾಗಿ ಸದಾ ಭಗವಂತನ ಧ್ಯಾನಪರಾಯಣರಾಗಿರುತ್ತೇವೆ. ಮುಂದೆ ಕಲಿಯುಗವು ಸಮೀಪಿಸಿದ ಬಳಿಕ ನೋಡೋಣಂತೆ !! (ಕಿವಿಗೊಟ್ಟು ಕೇಳಿ) ಆಕಾಶದಲ್ಲಿ ವೀಣಾರವವು ಕೇಳಬರುತ್ತಲಿದೆ; ನಾರದರು ಸಮೀಪ ದಲ್ಲಿಯೇ ಇರಬಹುದೇನು ? ಅಕೋ ! ಆ ಮಹಾತ್ಮರೇ ಇಲ್ಲಿಗೆ ಬರುತ್ತಲಿರು ವರು.

(ನಾರದರು ಪ್ರವೇಶಿಸುತ್ತಾರೆ)

**ನಾರದ:**—

ರಾಗ: ಕಾನಡಾ; ಧಾಟಿ: ನಿಜರೂಪೀ.

ಜಗದೀಶಾ ಪುರುಷೋತ್ತಮ ನೀನು ।
ಯೋಗಿ-ಗಗೋಚರನಾಗಿಹುದೇನು ? ॥ ಪಲ್ಲ ॥
ಕೋಪದಿ ಭೃಗುತಾಂ ಪಾದಾಘಾತದಿ ॥
ಆ ಪರಿ ಮಾಡಿದ ನೋವದನರಿಯಾ ? ॥ ೧ ॥

ಯಾರು ? ಪರ್ವತರೆ, ನಮಸ್ಕಾರ ! ನಮಸ್ಕಾರ !!

**ಪರ್ವತ:**—ನಮಸ್ಕಾರ ! ನಾರದರೆ, ತಮ್ಮ ದರ್ಶನದಿಂದ ನಾನು ಕೃತಾರ್ಥನಾದೆನು. ತಮ್ಮಂಥ ಮಹಾತ್ಮರ ದರ್ಶನವೇ ಸಕಲ ತಪಸ್ಸುಗಳ ಶ್ರೇಷ್ಠವಾದ ಫಲವು.

**ನಾರದ:**—ಪರ್ವತಮುನೀಶ್ವರರೆ, ತಮ್ಮಂಥ ಮಹರ್ಷಿಗಳಿಂದ ಜ್ಞಾನ ವನ್ನು ಹೊಂದಬೇಕೆಂದು ನಾನು ಮಧುಕರನಂತೆ ತ್ರಿಲೋಕಸಂಚಾರಿಯಾಗಿ ರುವೆನು.

**ಪರ್ವತ:**—ಕ್ಷಮಿಸಿರಿ ನಾರದರೆ! ಸಕಲ ಜ್ಞಾನಗಳ ಭಾಂಡಾರವೇ ತಾವು!! ನಮ್ಮಂಥವರಲ್ಲಿಯ ಅಜ್ಞಾನವನ್ನು ತೆಗೆದುಹಾಕಬೇಕೆಂದೇ ತಾವು ಪರಮ ಕಾರುಣಿಕರಾಗಿ ಹೀಗೆ ಸಂಚಾರಮಾಡುತ್ತಿರುವಿರಿ. ಎಲ್ಲಿಯಾದರೂ ವಿನೋದಪರವಾದ ಕಲಹವನ್ನೆಬ್ಬಿಸಿ ಜಗತ್ತಿಗೆ ಕಲ್ಯಾಣವನ್ನು ಉಂಟು ಮಾಡುವಂಥ ವಿಲಕ್ಷಣವಾದ ಪದ್ಧತಿ ತಮ್ಮದು. ಸದ್ಯಕ್ಕೆ ಅಂಥ ಪ್ರಸಂಗ ವೇನಾದರೂ ಇರುವದೇನು?

**ನಾರದ:**—(ನಕ್ಕು) ಏನೂ ಇಲ್ಲ! ಆದರೂ ದ್ವಾಪರನ ಅವತಾರವು ತೀರಿದ ಬಳಿಕ ಮುಂದೆ ನೀಚನಾದ ಕಲಿಯೇ ಯುಗನಾಯಕನಾಗತಕ್ಕವನಷ್ಟೆ? ಅವನ ದುಷ್ಕೃತಿಗಳಿಗೆ ಈಗಿನಿಂದಲೇ ಒಂದು ನಿಗ್ರಹವನ್ನು ಕಲ್ಪಿಸುವದು ವಿಹಿತವಾಗಿ ತೋರುತ್ತದೆ.

**ಪರ್ವತ:**—ಅವಶ್ಯವಾದ ಮಾತಿದು. ಇದಕ್ಕೇನು ಯೋಚನೆ ಮಾಡಿ ರುವಿರಿ?

**ನಾರದ:**—ಮಾಡಿದ್ದೇನೆ!! ನಿಷಧ ದೇಶದ ನಲಚಕ್ರವರ್ತಿಯನ್ನು ನೀವು ಬಲ್ಲಿರಷ್ಟೆ?

**ಪರ್ವತ:**—ಅರಿಯದೇನು? ಅವನೊಳ್ಳೇ ನೀತಿವಂತನೂ ಪ್ರತಾಪ ಶಾಲಿಯೂ ಆದ ರಾಜನಾಗಿರುವನು.

**ನಾರದ:**—ನಲನು ವಿದರ್ಭರಾಜನ ಮಗಳಾದ ದಮಯಂತಿಯ ದಿವ್ಯ ವಾದ ರೂಪಕ್ಕೆ ಮರುಳಾಗಿರುವನು. ಆ ರಾಜಕುಮಾರಿಯಾದರೂ ನಲನಲ್ಲಿ ಆಸಕ್ತವಾದ ಪ್ರೇಮವುಳ್ಳವಳಾಗಿರುವಳು. ಅವರೀರ್ವರು ಬೇಗನೆ ದಂಪತಿ ಗಳಾಗಬೇಕಾಗಿದೆ.

**ಪರ್ವತ:**—ವಿಹಿತವಾದ ಮಾತಿದು. ಇದರಲ್ಲಿ ನಾವೇನು ಮಾಡ ತಕ್ಕದ್ದು?

**ನಾರದ:**—ನಾವು ಇಂದ್ರನ ಸಭೆಗೆ ಹೋಗಿ ಆ ಸ್ತ್ರೈಣನ ಮುಂದೆ ದಮಯಂತಿಯ ಲಾವಣ್ಯದ ವರ್ಣನೆಯನ್ನು ಅತಿಶಯವಾಗಿ ಮಾಡೋಣ! ಇಂದ್ರನು ಅದನ್ನೆಲ್ಲಾ ಕೇಳಿ ಭ್ರಾಂತಿಬಡಿದವನಾಗಿ ನಾವು ಹೇಳಿದಂತೆ ಕುಣಿ ಯುವನು.

**ಪರ್ವತ:**—ಮಧ್ಯದಲ್ಲಿ ಈ ವಿಧಾನವೇಕೆ ನಾರದರೆ ?

**ನಾರದ:**—ಹೇಳುತ್ತೇನೆ ಕೇಳಿರಿ !! ನೀವು ಇಂದ್ರನಿಗೆ ಹೀಗೆ ಹೇಳ ತಕ್ಕದ್ದು: " ಇಂದ್ರಾ, ನಲರಾಜನನ್ನು ನಿನ್ನ ದೂತನನ್ನಾಗಿಮಾಡಿ ನಿರುಪಮ ಸುಂದರಿಯಾದ ಆ ದಮಯಂತಿಯ ಬಳಿಗೆ ಕಳಿಸಿದರೆ ನಿನ್ನ ಕಾರ್ಯವು ಆಯಾಸವಿಲ್ಲದೆ ನೆರವೇರುವದು. "

**ಪರ್ವತ:**—ನಾರದರೆ, ನನಗೆ ಸುಳ್ಳಾಡಹೇಳುತ್ತೀರಾ ?

**ನಾರದ:**—(ನಕ್ಕು) ವಿವಾಹದ ಕಾರ್ಯಗಳಲ್ಲಿ ಅಲ್ಪ ಸ್ವಲ್ಪ ಸುಳ್ಳು ಹೇಳಿದರೂ ದೋಷವಿಲ್ಲ.

**ಪರ್ವತ:**—ಒಳ್ಳೇದು, ಮುಂದೇನು ?

**ನಾರದ:**—ಹೀಗೆ ನಲನು ಅನಾಯಾಸವಾಗಿ ದಮಯಂತಿಯನ್ನೂ ಅವಳು ನಲನನ್ನೂ ಕಂಡು ಈರ್ವರೂ ಮೋಹಪರವಶರಾಗಿ ಬೇಗನೆ ದಂಪತಿ ಗಳಾಗುವರು.

**ಪರ್ವತ:**—ಇಷ್ಟೆಲ್ಲ ಆಯಿತು ನಾರದರೆ, ಕಲಿಯ ಪಾರಿಪತ್ಯದ ಸಂಬಂಧವೆಲ್ಲಿ ?

**ನಾರದ:**—ಕೇಳಿರಿ ! ನಲದಮಯಂತಿಯರ ವಿವಾಹವು ಸಾಂಗವಾಗಿ ಮುಗಿಯುವ ಸಮಯಕ್ಕೆ ನಾನು ಕಲಿಯನ್ನು ತಟ್ಟಿ ಅವನಿಗೆ ಹೀಗೆ ಹೇಳು ವೆನು: "ಕಲಿಯೇ, ದಮಯಂತಿಯು ಲೋಕೈಕ ಸುಂದರಿಯಾದ ರಾಜ ಕನ್ನೆಯು; ನೀನಾದರೂ ಜಗತ್ತಿಗೆ ಮೀರಿದವನಾದ ವಿಕ್ರಮಶಾಲಿಯು ! ಅವಳಿಗೆ ನೀನೇ ತಕ್ಕವನಾದ ವರನು ! ಅವಳ ಪ್ರಾಪ್ತಿಯನ್ನು ನೀನು ಮಾಡಿ ಕೊಳ್ಳದಿದ್ದರೆ ನಿನ್ನ ಪರಾಕ್ರಮದ ಸಾರ್ಥಕ್ಯವೇನು ? "

**ಪರ್ವತ:**—ಇದರಿಂದೇನಾಗುವದು ? ವಿಘ್ನದ ಮೇಲೆ ವಿಘ್ನವನ್ನು ಕಲ್ಪಿಸುತ್ತೀರಿ !!!

**ನಾರದ:**—ಕಲಿಯು ದಮಯಂತಿಯ ಪ್ರಾಪ್ತಿಗಾಗಿ ಹೊರಟವನು ನಲದಮಯಂತಿಯರ ವಿವಾಹವು ಮುಗಿದ ಬಳಿಕ ಕುಂಡಿನಪುರಕ್ಕೆ ಬಂದು, ಆಶಾಭಂಗದ ವೇದನೆಯಿಂದ ನಲದಮಯಂತಿಯರನ್ನು ಕಾಡುವೆನೆಂಬ ಪ್ರತಿಜ್ಞೆ ಮಾಡುತ್ತಾನೆ.

**ಪರ್ವತ**:—ಏನು ನಾರದರೆ ! ಸಜ್ಜನನಾದ ನಲರಾಜನನ್ನು ಕಾಡಿಸುವದು ಇಷ್ಟವಾದದ್ದೆ ?

**ನಾರದ**:—ಇದರಿಂದ ಕಡೆಗೆ ಕಲಿಗೇ ಹಾನಿ ತಟ್ಟುವದು !!

**ಪರ್ವತ**:—ಅದು ಹೇಗೆ ?

**ನಾರದ**:—ಕಲಿಯು ನಲನನ್ನು ಕಾಡಿ ಅವನನ್ನು ಪಟ್ಟದಿಂದ ತಳ್ಳುವನು. ಬಳಿಕ ನಲನು ಒಂದು ವರ್ಷದ ವರೆಗೆ ಅಜ್ಞಾತವಾಸದಲ್ಲಿದ್ದುಕೊಂಡು ಉಜ್ವಲವಾದ ವ್ರತಾಚರಣವನ್ನು ಮಾಡಿ ಕಲಿಯನ್ನು ಮರ್ದಿಸುವಂಥ ಶಕ್ತಿಯನ್ನು ಪಡಕೊಳ್ಳುವನು.

**ಪರ್ವತ**:—ಸಾಧು ! ನಾರದರೆ, ಒಳ್ಳೇ ಹಂಚಿಕೆಯನ್ನು ತೆಗೆದಿರಿ. ಮುಂದೆ ಕಲಿಯುಗದಲ್ಲಿ ನಲದಮಯಂತಿಯರ ನಾಮೋಚ್ಚಾರ ಮಾತ್ರದಿಂದಲೇ ಕಲಿಯು ನಿಲ್ಲದೆ ಓಡಿಹೋಗುವನು.

**ನಾರದ**:—ಭಗವನ್, ತಮ್ಮಂಥ ಮಹಾತ್ಮರ ಮುಖದಿಂದ ಹೊರಟಿರುವ ಈ ವಚನವು ಲೋಕಕ್ಕೆ ಆಶೀರ್ವಾದವೇ ಆಯಿತು !!! ಇನ್ನು ನನ್ನ ಕಾರ್ಯವು ನಿಶ್ಚಯವಾಗಿ ಸಾಧಿಸಿತೆಂದು ನಾನು ತಿಳಿಯುತ್ತೇನೆ. ನಡೆಯಿರಿನ್ನು; ಇಂದ್ರನ ಸಭೆಗೆ ಹೋಗೋಣ.

**ಪರ್ವತ**:—ಆಗಲಿ ನಡೆಯಿರಿ !

**ನಾರದ**:—

ಧಾಟಿ:—‘ ಬಾಬಾ ನಹಿ ಮುಜಕೊ ಛೋಡಜಾ. ’

ನಾರಾಯಣ ! ಎನಲು ಮೋಕ್ಷವೈ ॥ ಪಲ್ಲ ॥
ಹರಿನಾಮವೊಂದೇ ನೌಕೆ ।
ಘೋರವಾದ ಭವಸಾಗರಕೆ ।
ಬೇರೆ ಚಿಂತೆ ಮಾಡಲೇಕೆ ॥ ೧ ॥
ನಾರಾಯಣ ! ನಾರಾಯಣ !! ನಾರಾಯಣ !!!

(ಈರ್ವರೂ ಹೋಗುತ್ತಾರೆ)

( ತೆರೆ )

## ಎರಡನೆಯ ಪ್ರವೇಶವು

(ಸ್ಥಳ:—ನಲರಾಜನ ವಿಶ್ರಾಮಮಂದಿರ.)

(ರಾಜನೂ ವಿದೂಷಕನೂ)

**ರಾಜಾ:**—ಮಿತ್ರಾ ಉತ್ಸವಮೂರ್ತೀ, ಒಂದು ದುರ್ಧರವಾದ ಪ್ರಸಂಗವು ಬಂದೊದಗಿದೆ. ಏನು ಮಾಡಲಿ ? ನಿರುಪಾಯವಾಗಿದೆ.

**ವಿದೂ:**—ಏನು ಪ್ರಸಂಗವದು ? ನಿನಗೆ ದುರ್ಧರವಾದದ್ದೆ ?

**ರಾಜಾ:**—ನನ್ನನ್ನು ಬಿಟ್ಟು ಇಂದ್ರನನ್ನು ವರಿಸೆಂದು ನಾನೇ ಹೋಗಿ ನನ್ನಾ ಪ್ರಿಯತಮೆಯಾದ ದಮಯಂತಿಗೆ ಹೇಳಬೇಕಾಗಿದೆ.

**ವಿದೂ:**—ಇದೇನು ನಗೆಯಾಡುವಿಯೋ; ನಿಜವೊ ?

**ರಾಜಾ:**—ನಾನು ಹೇಳಿದ್ದು ನಿಜವು ! ದೈವಕ್ಕೆ ಏನು ಮಾಡುವದು?

**ವಿದೂ:**—ಹಾಂ ! ಇದೇನು ಹೇಳಿದಿ !! ಮಿತ್ರಾ, ಆವದ್ದಾದರೂ ಏನು ?

**ರಾಜಾ:**—ಪರ್ವತಮಹರ್ಷಿಗಳು ಮೊದಲು ನನ್ನ ವಚನವನ್ನು ತೆಗೆದುಕೊಂಡು ಆಮೇಲೆ ಇಂಥ ದುಷ್ಕರವಾದ ಆಜ್ಞೆಯನ್ನು ವಿಧಿಸಿದರು. ಏನು ಮಾಡಬೇಕೆಂಬದು ನನಗೆ ತೋಚಲೊಲ್ಲದು. ಮಿತ್ರಾ, ನೀನೇ ಒಂದು ಹಂಚಿಕೆಯನ್ನು ಹೇಳಬಾರದೆ ?

**ವಿದೂ:**—(ಧ್ಯಾನಿಸಿ) ಮಿತ್ರಾ, ದಮಯಂತಿಯು ನಿನ್ನನ್ನು ಪ್ರೀತಿಸುತ್ತಿರುವದು ನಿಜವೆ ?

**ರಾಜಾ:**—ಸಂದೇಹವೇಕೆ ಮಿತ್ರಾ ? ಆ ಪ್ರಿಯತಮೆಯು ನನಗೆ ಬರೆದಿರುವ ಪತ್ರವನ್ನು ನೀನು ನೋಡಿರುವಿಯಲ್ಲ !!

**ವಿದೂ:**—ಹಾಗಾದರೆ ಆ ಮಾನಿನಿಯು ಇಂದ್ರನ ಸಂದೇಶವನ್ನು ಸರ್ವಥಾ ನಿರಾಕರಿಸುವಳು. ವಿಚಾರವೇಕೆ ? ನೀನು ವಚನಬದ್ಧನಾಗಿದ್ದರೆ ದಮಯಂತಿಯು ಬೇರೆ ಆಗಿಲ್ಲವಷ್ಟೆ ?

**ರಾಜಾ:**—(ಸ್ಫೂರ್ತಿಯನ್ನು ತಳೆದು) ಅಹುದು ನೋಡು ಮಿತ್ರಾ! ಈ ವಿಚಾರವು ನನಗೆ ತೋಚಲೇ ಇಲ್ಲ! ನನ್ನಲ್ಲಿ ಸಂಪೂರ್ಣವಾಗಿ ಪ್ರೇಮ ವನ್ನು ತಳೆದಿರುವ ಆ ಕುಲಾಂಗನೆಯು ಇಂದ್ರನ ಸಂದೇಶವನ್ನು ಕಿವಿಯಲ್ಲಿ ಕೂಡ ಹಾಕಿಕೊಳ್ಳಲಿಕ್ಕಿಲ್ಲ !!

**ವಿದೂ:**—ಅದೇ ಹೇಳುತ್ತೇನೆ !!! ಇಂದ್ರನ ಸಂದೇಶವನ್ನು ನೀನು ಮುಟ್ಟಿಸುವ ಹಾಗೆ ದಮಯಂತಿಗೆ ಮುಟ್ಟಿಸಿಬಿಡು ! ಅವಳು ನಿಶ್ಚಯವಾಗಿ ಇಂದ್ರನನ್ನು ಒಲ್ಲೆನೆಂದು ಹೇಳೇ ಹೇಳುವಳು. ಬಳಿಕ ನೀನು ನಡೆದ ಸಂಗತಿ ಯನ್ನು ಇಂದ್ರನಿಗೆ ತಿಳಿಸಿದಿಯೆಂದರೆ ಗೆದ್ದಿ !!

**ರಾಜಾ:**—ಇನ್ನೇನು ಚಿಂತೆಯಿಲ್ಲ ಬಿಡು. ಅಯತ್ನವಾಗಿ ನನ್ನ ಪ್ರಾಣಕಾಂತೆಯನ್ನು ಪ್ರತ್ಯಕ್ಷವಾಗಿ ಕಾಣುವಂಥ ಸಮಯ ದೊರಕಿತು ! ಈಗಲೇ ನಾನು ಹಾರಬಿಟ್ಟ ಹಕ್ಕಿಯಂತೆ ನಿಮಿಷಾರ್ಧದಲ್ಲಿ ಕುಂಡಿನಪುರಕ್ಕೆ ಹೋಗಿಬಿಡುವೆನು.

**ವಿದೂ:**—ಉದ್ರೇಕದಿಂದ ನಿನ್ನ ಚಿತ್ತಕ್ಕೆ ಭ್ರಮವಾಯಿತೇನು ಮಿತ್ರಾ? ಕುಂಡಿನಪುರವೆಲ್ಲಿ? ನೀನೆಲ್ಲಿ? ನಿಮಿಷಾರ್ಧದಲ್ಲಿ ಹೇಗೆ ಹೋಗುವಿ ?

**ರಾಜಾ:**—ಹೇಗೆಂದರೆ ! ಆಕಾಶಮಾರ್ಗದಲ್ಲಿ ನಿಮಿಷಾರ್ಧದಲ್ಲಿ ಬೇಕಾದ ಸ್ಥಳಕ್ಕೆ ಹೋಗಿಬರುವಂಥ ಶಕ್ತಿಯನ್ನು ಇಂದ್ರನು ನನಗೆ ಕೊಟ್ಟಿ ರುವನು.

**ವಿದೂ:**—ಹೀಗೇನು !!? ಹಾಗಾದರೆ ನೀನು ನಮ್ಮ ಕೈ ಬಿಟ್ಟುಬಿಟ್ಟೆ ಬಿಡು ! ನೀನಿನ್ನು ದಮಯಂತಿಯ ಆಶೆಯಿಂದ ವಿದರ್ಭರಾಜನ ಪಟ್ಟಣದ ಸುತ್ತಲೂ ಬಿಟ್ಟುಬಿಡದಲೆ ಗರುಡನಂತೆ ಹಾರಾಡುತ್ತಲೇ ಇರುವಿ !!

**ರಾಜಾ:**—ಹುಚ್ಚನೇನು ನೀನು ? ಸಂಜೆಗೆ ಮರಳಿ ಬಂದೇ ಬರು ತ್ತೇನೆ. (ತನ್ನಷ್ಟಕ್ಕೆ) ಮನಸ್ಸೇ, ನನಗಿಂತಲೂ ಮುಂಚಿತವಾಗಿ ಆ ಇಂದುವದನೆಯನ್ನು ನೋಡಬೇಕೆಂದು ನೀನು ಹೋಗುವಿಯಲ್ಲವೆ ? ಈ ಕಣ್ಣುಗಳು ನನ್ನ ಬಳಿಯಲ್ಲಿಯೇ ಇರಲು ಆ ಮೋಹನಾಂಗಿಯನ್ನು ನೀನು ನೋಡುವದು ಹೇಗೆ ?

## ರಾಗ—ಬೆಹಾಗ: ಆದಿತಾಳ.

ಧಾಟಿ:—' ಬಾರಬಾರ ಕರಕಾಯಿಶೊ, ಘುರಿಯಾ '

ತಾಳು ತಾಳು ನನಗಾಗಿ ಮನವೆ ॥ ತಾಳು.........
ತಾಳು ತಾಳು ಮನವೆ ಬರುವೆನು ನಾನಿರದೆ ।
ಇಳೆಯೊಳೆನಿತು ಜೀವಿಪೆನಿನೆಯುಳ
ಮುಖ ನೋಡದಿರೆ ಪೇಳು ॥ ಪಲ್ಲ ॥
ಶಶಿಮುಖಿಯು ಸುಹಾಸಾಮೃತವನು ಸೇ-।
ವಿಸಿ ಸದಾ ಮುದಾನ್ವಿತ-ನಹೆನೊ ಕೇಳು ॥ ೧ ॥

( ತೆರೆ )

## ಮೂರನೆಯ ಪ್ರವೇಶವು

ಸ್ಥಳ:—ವಿದರ್ಭರಾಜನ ಅಂತಃಪುರವು

(ದಮಯಂತಿಯೂ ಸಖೀಜನರೂ)

**ದಮಯಂತಿ:**—(ಓರ್ವಳೆ) ರಾಗ—ಯಮುನ.

ಧಾಟಿ:—' ಮೋಹನಾಂಗ ಮೋಸಗೈದನೆ. '

ನಾನು ಹೀಗೆ ಭ್ರಾಂತಳಾದೆನೆ । ನಾನು ಹೀಗೆ ॥
ಸಾನುರಾಗದಿ ಚಿತ್ತಾರವ ನೋಡುತ ॥ ಪಲ್ಲ ॥
ನೋಡಿ ನೋಡಲು ಕೇಳ್ ಪೀಡೆ ಮಾಡುವ ಸ್ಮರ ॥
ಬೇಡಿನ್ನಿದನು ನಾಂ ದೂಡುವೆನೀಗಲೆ ॥ ೧ ॥

( ಚಿತ್ರವನ್ನು ದಿಟ್ಟಿಸಿ ನೋಡಿ ಮಂದಹಾಸದಿಂದ ) ದಮಯಂತೀ, ಮನವನ್ನು ವಿಭ್ರಮಗೊಳಿಸುವಂಥ ಈ ಚಿತ್ರವನ್ನು ದೂಡಿಬಿಡುವವಳು ನೀನೇ ಏನು ?!

ಒಂದೇ ಕ್ಷಣವೆ ಕೇಳ್ ಸುಂದರಾಂಗನ ಚಿತ್ರ ॥
ಮುಂದಿರದಿದ್ದರೆ ಹೊಂದುವೆ ಮೋಹವ ॥ ೨ ॥

ಈ ಇಂದ್ರಜಾಲದ ಚಿತ್ರವನ್ನು ನೋಡಲಿಕ್ಕೂ ಆಗದು; ಬಿಡಲಿಕ್ಕೂ ಆಗದು. ಚಿತ್ರವೆ, ನೀನು ನನ್ನ ಇಷ್ಟದೇವತೆಯು ! ಗಂಧಾನುಲೇಪನಗಳಿಂದ ನಿನ್ನನ್ನು ಪೂಜಿಸಿ ನಿನಗೆ ಪುಷ್ಪಾಂಜಲಿಯನ್ನು ಸಮರ್ಪಿಸುವೆನು. ಪ್ರಸನ್ನನಾಗುವಿಯಾ ? (ಹಾಗೆ ಮಾಡುತ್ತಾಳೆ)

(ಚಂದ್ರಾವಲಿಯು ಪ್ರವೇಶಿಸುತ್ತಾಳೆ)

**ಚಂದ್ರಾ:**—ಏನು ಮಾಡುತ್ತಿರುವಿ ದಮಯಂತೀ ? ಮಗುವಿನಂತೆ ಗೊಂಬೀ ಆಟವನ್ನು ಆಡುತ್ತಿರುವಿಯೇನು ?

**ದಮಯಂತಿ:**—(ಚಕಿತಳಾಗಿ) ಯಾರವರು ! (ಚಂದ್ರಾವಲಿಯನ್ನು ಕಂಡು) ನೀನೇ !!? ಚಂದ್ರಾ, ಕಡೆಯವರೆಗೆ ನಾನು ಚಿಕ್ಕ ಬಾಲಕಿಯೇ ಆಗಿದ್ದರೆ ಒಳ್ಳೇದಾಗುತ್ತಿತ್ತು.

ರಾಗ:—ಧಾನೀ. ಧಾಟಿ:—' ನೈನನುಮೇ ತೋರಿಛಬು '

ಯೌವನವೇ ಮುರಿಯಿದು ನಾರಿಯರಿಗನೆ ಸಖಿ ತೋರುವದೇ ॥ ಪ ॥
ನಾನೆ ರತಿಯು, ನಾನೇ ಭುವನ ರಮಣಿಯೇ-
ನೆನುತೆ ಸ್ಮಯಾಕುಲೆ- ಯಾದೊಡನೆ ॥ ೧ ॥
ಮಾರನದಯನಾಗಿ ಮರೆಗೆ ನಿಲಿತು ತಾಂ ॥
ಶರವೊಳಿದೀಪರಿ ಘಾತಿಪನೇ ॥ ೨ ॥

**ಚಂದ್ರಾ:**— ಸಖಿ, ಸ್ಮರನ ಬಾಧೆಯು ಎಲ್ಲ ತರುಣಿಯರಿಗೂ ಸಾಮಾನ್ಯವಾದದ್ದು.

ಧಾಟಿ:—' ಎಷ್ಟು ತಳಮಳಿಸುವಿ, ನೀ ಚಕೋರನೆ. '

ಸಖಿ, ಬಿಡದಿದು ಬಾಧೆಯು ಯಾರಿಗೂ ॥ ಪಲ್ಲ ॥
ಹಿತಕರವಾಗಿಹು-ದಿದನುರೆ ಸಹಿಸಲು
ಅತಿರಸವೀವುದು ಪ್ರೇಮ ತಾನೆ ॥ ೧ ॥

**ದಮಯಂತಿ:**—(ವಿಷಾದದಿಂದ ನಕ್ಕು) ಇರಬಹುದು. ಆದರೆ ಸದ್ಯದ ಸಂತಾಪವನ್ನು ಸಹಿಸುವದು ಬಹು ಕಷ್ಟ, ಕಂಡಿಯಾ ! (ಎಂದು ಉಸುರು ಹಾಕುತ್ತಾಳೆ)

(ವಸುಮತಿ ಮಂಜುಘೋಷೆಯರು ಪ್ರವೇಶಿಸುತ್ತಾರೆ)

**ದಮಯಂತಿ:**—(ಲಗುಬಗೆಯಿಂದ) ಚಂದ್ರಾವಲಿ! ವಸುಮತಿ ಮಂಜು ಘೋಷೆಯರು ಬಂದರು ನೋಡು !! ಈ ಚಿತ್ರವನ್ನು ಎಲ್ಲಿಯಾದರೂ ಬಚ್ಚಿಡ ಬಾರದೆ ?

**ವಸುಮತಿ:**—ಅಷ್ಟು ಗಲಿಬಿಲಿ ಯಾಕೆ ದಮಯಂತೀ ? ಅರಿಯದ ಚಿತ್ರವಾಗಿದ್ದರೆ ಬಚ್ಚಿಡಬಹುದಾಗಿತ್ತು. ಈ ಗಂಧವನ್ನು ನೋಡು !! ಈ ಹರವಿದ ಹೂಗಳನ್ನು ನೋಡು !!! ಏನು ಚಮತ್ಕಾರವಿದು ? ಈ ಚಿತ್ರವನ್ನು ನೀನು ಪೂಜಿಸುತ್ತಿದ್ದಿಯೇನು ?

**ದಮಯಂತಿ:**—ವಸುಮತಿ, ಈಗ ನನ್ನ ಎಡಗಣ್ಣು ಹಾರುತ್ತಲಿದೆ. ಹೀಗೆ ಶುಭಸೂಚನೆಯಾಗುತ್ತಿರುವ ಸಮಯದಲ್ಲಿ ನಾನು ಸುಳ್ಳಾಡಲಾರೆನು. ನಾನು ನನ್ನ ಮನೋರಮಣನ ಚಿತ್ರವನ್ನು ಪೂಜಿಸುತ್ತಿದ್ದೆನೆಂದು ಹೇಳಿದರೆ ನೀನೇನು ಮಾಡುವಾಕೆ ?

**ವಸುಮತಿ:**—ಆಹಾ ! ಏನು ದರ್ಪವಿದು !! ನಾನೇನು ಮಾಡೇನು ದಮಯಂತೀ ? ನಿನ್ನನ್ನು ಆದೇ ಮನೋರಮಣನ ಸ್ವಾಧೀನ ಮಾಡಿಬಿಡುವೆನು. ತಿಳಿಯಿತೆ ?

**ಚಂದ್ರಾ:**— ಸತ್ಯಸಂಕಲ್ಪವಿದ್ದರೆ ಹಾಗೇ ಆದೀತು ವಸುಮತಿ ! ಇದರಲ್ಲೇನು ಆಶ್ಚರ್ಯ ?

**ವಸುಮತಿ:**—ಅಹುದವ್ವಾ, ಮುಪ್ಪಿನ ಮುತ್ತೈದೆ!! (ನಗುತ್ತಾಳೆ)

**ಮಂಜು:**—ಈ ಮಾತು ಸತ್ಯಸಂಕಲ್ಪಕ್ಕೆ ಒಳಗಾಗಿರಲಿ, ವಸುಮತಿಯ ಅಧಿಕಾರದಲ್ಲಿರಲಿ, ಹೇಗಾದರೂ ಎಂಟೂನೆಂಟು ದಿವಸ ನಮಗೆ ಉತ್ಸವಗಳನ್ನು ನೋಡಲಿಕ್ಕಾಗುವದೋ ಇಲ್ಲವೋ ? ಸಾಕು !

**ದಮಯಂತಿ:**—ಸುಮ್ಮನೆ ಒಣಮಾತುಗಳನ್ನಾಡಿ ಯಾಕೆ ದಣುಕೊಳ್ಳುವಿ ಮಂಜುಘೋಷೆ ?

**ವಸುಮತಿ:**—ಒಣಮಾತುಗಳೇಕೆ ? ಇನ್ನು ಮೇಲೆ ನಾವು ಮಾತುಗಳನ್ನು ನವರಸಗಳಲ್ಲಿ ತೋಯಿಸಿ ಆಡತಕ್ಕವರು !!

**ದಮಯಂತಿ:**—ಸಾಕುಮಾಡಿರಿ !!! ಮಂಜುಘೋಷೆ, "ಎಂಥ ಯೋಗಿಯೋ ನೀನು" ಎಂಬ ಪದವನ್ನು ನೀನು ಬಹು ಇಂಪಾಗಿ ಹಾಡುವಿ. ಹಾಡಬಾರದೆ ?

**ವಸುಮತಿ:**—ಅಹುದು ಮಂಜುಘೋಷೆ ! ಗೌರೀಹರರು ವಧೂವರಗಳ ಸಂಯೋಗವನ್ನು ಜಾಗ್ರತೆಯಾಗಿ ಮಾಡುವದರಲ್ಲಿ ಬಹು ದಕ್ಷರು. ಅವರ ಸ್ತುತಿಯ ಹಾಡನ್ನು ಈ ಸಮಯದಲ್ಲಿ ಹಾಡುವದು ಯೋಗ್ಯವೆ !!

**ಚಂದ್ರಾ:**—ಎಲ್ಲಿ ಬಿಟ್ಟರೂ ವಸುಮತಿಯು ತನ್ನ ಹಾದಿಗೇ ಬರುವಳು. ಆಗಲಿ ಮಂಜುಘೋಷೆ ಹಾಡು !

**ಮಂಜು:**— ರಾಗ:—ಸಾರಂಗ

**ಧಾಟಿ—'ಎಂದು ನೋಡುವೆ ನಿನ್ನ'**

ಎಂಥ ಯೋಗಿಯೊ ನೀನು ಗೌರೀ ಮನೋಹರ ॥ ಪಲ್ಲ ॥
ಎಂಥ ಯೋಗಿಯೊ ಭಸ್ಮವಂಗದಿ, ಕಂತೆ ಜಡೆ-ಭಾರಗಳ ಧರಿಸಿದಿ ॥
ಇಂತಿಪಾಡಂಬರಕೆ ಅಂಕದಿ, ಶಾಂತೆಯೇಕೀ ಭುವನಸುಂದರಿ ॥ ಅ ಪ ॥

ಆರ ಧ್ಯಾನವ ಮಾಳ್ಪಿ ? ಪೇಳದನು ನೋಡುವಿ ।
ಓರೆಗಣ್ಣ ಲದೇನು ? ಸೀಸಿದಕೆ ಗೆದ್ದಿಯಾ ।
ಮಾರನನು ಗಿರಿಜೇಶಾ ? ಆಜ್ಞೇಯುವೇಶಾ ॥

ನಿರುತ ನಿನ್ನನು ಭಜಿಪನಾರಿಗೆ ।
ವರವನೊಂದನೆ ನೀನು ನೀಡುವಿ ॥
"ಇರದೆ ಭಜಿಸುವ ಪತಿಯು ನಿನ್ನಗೆ ।
ದೊರೆವ" ನೆಂಬಿ ವಿಚಾರ ಮಾಡದೆ ॥ ೧ ॥

**ಎಲ್ಲರೂ**—"ಎಂಥಾ ಯೋಗಿಯೋ ನೀನು" (ಎಂದು ಪಲ್ಲ ಅನ್ನುತ್ತಾರೆ)

(ನಲರಾಜನು ಪ್ರವೇಶಿಸುತ್ತಾನೆ)

**ರಾಜಾ**:—(ತನ್ನಷ್ಟಕ್ಕೆ) ಏನಾಶ್ಚರ್ಯವಿದು ? !! ಹಿಮಾದ್ರಿಯ ಅಡಿಯಲ್ಲಿರುವ ನನ್ನ ರಾಜಧಾನಿಯೆಲ್ಲಿ ? ಈ ವಿದರ್ಭನಗರವೆಲ್ಲಿ !! ಗರುಡನಂತೆ ಹಾರಾಡುತ್ತೆ ನಿಮಿಷ ಮಾತ್ರದಲ್ಲಿ ಇಷ್ಟುದೂರ ಬಂದುಬಿಟ್ಟೆನು !! ಆಕಾಶದಲ್ಲಿ ಹಾರಿ ಬರುತ್ತಿರುವಾಗ ಈ ನನ್ನ ಪುಷ್ಟವಾದ ದೇಹವು ಬೆಂಡಿಗಿಂತಲೂ ಹಗುರಾದಂತೆ ತೋರಿತು ! ವೇಗದ ಭರಕ್ಕೆ ಉಸುರಾಡಿಸುವದು ಕೂಡಾ ಕಠಿಣವಾಗಿಹೋಗಿತ್ತು !! ಕಣ್ಣುಗಳು ಗರಗರನೆ ತಿರುಗಿದಂತಾಗಿ ಚಿತ್ತಕ್ಕೆ ಭ್ರಮ ಬಂದಿತ್ತು !!! ಕೆಳಗೆ ಭೂಲೋಕದ ನೋಟವಂತೂ ವಿಪರೀತವಾಗಿ ತೋರಿತು.

'ವಸಂತತಿಲಕ'

ಅಂಭೋಧಿಯೊಳ್ ರಭಸದಿಂ ಧರೆ ತೇಲಿ ಪೋದಳ್ ।
ನಾಂ ಬರ್ಪ ಮಾರ್ಗದಿದಿರೊಳ್ ನಿಜಬಂಧನಂಗಳ್ ॥
ತಾಂ ಭೇದಿಸೆಂಬೊಲುರೆ ತೋರಿತು ನನ್ನ ವೇಗ- ।
ಕ್ಕಂ ಭೂಧರಾಟವಿ-ಪುರಾದಿಗಳೋಡುವಂದಂ ॥ ೧ ॥

(ಆಹ್ಲಾದ) ಎಂಥ ಶೋಭಾಯುಮಾದ ಪ್ರಾಸಾದವಿದು ! ದಮಯಂತಿಯ ನಿವಾಸದಿಂದ ಧನ್ಯತೆಯನ್ನು ಹೊಂದಿದ ಮಂದಿರವು ಇದೇ ಇರಬಹುದೇನು ? (ಕಿವಿಗೊಟ್ಟು ಕೇಳಿ) ಇಲ್ಲಿ ಯಾರೋ ಮಂಜುಲವಾಣಿಯರು ಬಹು ರಮ್ಯವಾಗಿ ಹಾಡುತ್ತಾರೆ. ಒಳಗೆ ಪ್ರವೇಶಮಾಡಿ ನೋಡೋಣ ! (ಪ್ರವೇಶ ಮಾಡಿ) ಆಹಹಾ ! ಏನು ನಯನೋತ್ಸವವಿದು !!!

ರಾಗ—ಬಾಗೇಶ್ರೀ. ತಾಲ—ಝಂಪಾ.

ಯಾರೀ ಮನೋಹಾರಿ ನಾರೀ ಪರೀವಾರೆ ।
ಹಾರಾವಲಿಯೊಳು ಹೀರೋಪಮಾನೆ ॥
ತಾರಾ ಪರೀವಾರೆ ಶ್ರೀರೋಹಿಣೀದೇವಿ ।
ಈ ರೂಢಿಗೈತಂದ- ಳಾರಾಮಕೇನೊ ॥ ೧ ॥

(ನಿರೀಕ್ಷಿಸಿ) ಈ ಚಾರ್ವಾಂಗಿಯು ದಮಯಂತಿಯೆ; ಸಂದೇಹವಿಲ್ಲ! ಆದರೂ ನನ್ನಲ್ಲಿರುವ ಚಿತ್ರಕ್ಕೂ ಪ್ರತ್ಯಕ್ಷವಾಗಿ ಕಾಣುವ ಈ ರೂಪೋಚ್ಚಯಕ್ಕೂ ಎಷ್ಟಾದರೂ ಹೆಚ್ಚುಕಡಿಮೆ !!!

ಇವರೆಲ್ಲರೂ ಗಾನದಲ್ಲಿ ತಲ್ಲೀನರಾಗಿ ಕುಳಿತಿದ್ದಾರೆ. ಇದೇ ಸಮಯದಲ್ಲಿ ನಾಲ್ಕು ಹೆಜ್ಜೆ ಮುಂದಕ್ಕೆ ಹೋದರೂ ಅಡ್ಡೀ ಇಲ್ಲ. (ಹೋಗುತ್ತಾನೆ)

**ದಮಯಂತಿ:**—(ಚಕಿತಳಾಗಿ) ಅವ್ವಯ್ಯಾ!! ಯಾರು ಬಂದವರಲ್ಲಿ?

(ರಾಜನನ್ನು ಕಂಡು ಎಲ್ಲರೂ ಚಕಿತರಾಗಿ ನಿಲ್ಲುತ್ತಾರೆ)

(ವಸುಮತಿಯನ್ನು ಕುರಿತು) ವಸುಮತಿ, ಈ ಮದನ ಸುಂದರನಾದ ಪುರುಷ ಸಿಂಹನು ಯಾರಿರಬಹುದೆ?

ಧಾಟಿ:—' ಕಡೆಯ ಮಾತು ಹೇಳಿ ಬಾ, ಕೇಳಿ ಬಾ ಬರುವನಿಲ್ಲೊ '

ಮದನನೇನೆ ಮೋಹಿಸಿ ನೋಯಿಸಿ ಬಿಡುವ ಮನವ ॥ ಪ ॥
ಬಂದವನೇ ಮನದಿ ಸೇರಿಕೊಂಡನಿವನು ಮೋಹನಾಂಗ ।
ಮುಂದೆ ನಿಂತ ಭ್ರಾಂತಿ ಮನಕೆ ಬಂದುದಕಟ! ॥ ೧ ॥
ಮೋಹಿಸಿ ನೋಯಿಸಿ...... ॥

**ವಸುಮತಿ:**—ದಮಯಂತೀ, ಚಿತ್ರದಲ್ಲಿ ತೋರಿಸಿದ ನಲರಾಜರ ರೂಪವೂ, ಈ ಸುಂದರಾಂಗನ ರೂಪವೂ ಒಂದೇ ಆಗಿ ತೋರುತ್ತವೆ. ಅಲ್ಲವೆ?

**ದಮಯಂತಿ:**—ಸಖಿ, ನೀನೊಳ್ಳೇ ಚತುರೆಯು! ಇವರು ನಲಮಹಾರಾಜರೆ! ಸಂದೇಹವಿಲ್ಲ. ಯಾಕೆ ಬಂದಿರುವರಾದೀತು, ಅವರನ್ನು ವಿಚಾರಿಸ ಬಾರದೆ?

**ವಸುಮತಿ:**—(ರಾಜನನ್ನು ಕುರಿತು) ಮಹಾಭಾಗರೆ, ತಾವು ಹೀಗೆ ಆಗಂತುಕರಾಗಿ ಈ ಶುದ್ಧಾಂತದಲ್ಲಿ ಬಂದಿದ್ದರೂ, ನೀತಿವಂತರಾಗಿ ತೋರುವಿರಿ!

ಆದ್ದರಿಂದ ನಾವು ನಿಃಶಂಕರಾಗಿರುತ್ತೇವೆ. ಯಾವ ರಾಜವಂಶವು ತಮ್ಮಿಂದ ಅಲಂಕೃತವಾಗಿದೆ ? ತಾವು ಇಲ್ಲಿಗೆ ಬಂದಿರುವ ಉದ್ದೇಶವೇನು ? ದಯಮಾಡಿ ಹೇಳಬೇಕೆಂದು ಪ್ರಾರ್ಥಿಸುತ್ತೇವೆ.

ರಾಜಾ:—ಸುಜಾತಳೆ, ನಾನು ನಿಷಧ ದೇಶದ ರಾಜನಾದ ನಲನು. ಮಹೇಂದ್ರನ ಸಂದೇಶವನ್ನು ನಿಮ್ಮ ರಾಜನಂದಿನಿಗೆ ತಿಳಿಸಲು ಬಂದಿದ್ದೇನೆ. ಈ ಚಾರ್ವಾಂಗಿಯೇ ದಮಯಂತೀ ದೇವಿಯೆಂದು ಗ್ರಹಿಸುತ್ತೇನೆ.

**ದಮಯಂತಿ:**—(ಶಂಕಿತಳಾಗಿ) ವಸುಮತಿ, ಮಹೇಂದ್ರನ ಸಂದೇಶ ವೇತರದು ಮತ್ತೆ ?

**ವಸುಮತಿ:**—ಅವರನ್ನೇ ಕೇಳಿದರಾಯಿತು ! (ರಾಜನನ್ನು ಕುರಿತು) ಮಹಾರಾಜರೆ, ಈ ನಮ್ಮ ಸಖಿಯೇ ರಾಜಕುಮಾರಿಯಾದ ದಮಯಂತೀ ದೇವಿಯು ! ಮಹೇಂದ್ರನ ಸಂದೇಶವೇನಿರುವದು ?

**ರಾಜಾ:**—(ತನ್ನಷ್ಟಕ್ಕೆ) ಏನೆಂದು ಹೇಳಲಿ !! ನನ್ನನ್ನು ಕಂಡು ಪ್ರೇಮದಿಂದ ಉಕ್ಕುತ್ತ ಸಸ್ಮಿತಳಾಗಿ ನಿಂತಿರುವ ಈ ಪ್ರಾಣಕಾಂತೆಗೆ ಇಂಥ ವಾರ್ತೆಯನ್ನು ನಾನು ಹೇಳಬಂದನೆ !!!

ರಾಗ—ಭೀಮಪಲಾಸ. ಧಾಟಿ–' ಟೇಂಡೇರೆ ನಾಲುಮೆ ಲಖಿ '

ಎಂತೆನೆ ನಾನುಸುರಲಿ ! ಈ ವಾರ್ತೆ ॥
ತಾಂ ಕೇಳಿ ವ್ಯಥಿಸಳೇಂ ಪ್ರೇಮಭರಾರ್ತೆ ॥ ಪಲ್ಲ ॥
ಜ್ವಾಲೆಯ ಪಾತವೇಂ ? ಜಲದವ ನೋಡಿ ।
ಅಲ್ಹಾದದಿ ತಾಂ ಲತೆ ನಲಿದಾಡೆ ॥ ೧ ॥

(ವ್ಯಾಕುಲನಾಗಿ) ಆಗಲಿ !! ಬಂದದ್ದನ್ನು ಅನುಭೋಗಿಸಲೇಬೇಕು ! (ವಸುಮತಿಯನ್ನು ಕುರಿತು) ಶುಭಾಂಗಿ, ಮಹೇಂದ್ರನ ಸಂದೇಶವನ್ನು ಈ ಪತ್ರದಲ್ಲಿ ಉಲ್ಲೇಖಿಸಿದ್ದೇನೆ, ನೋಡಿಕೊಳ್ಳಬಹುದು ! (ಪತ್ರವನ್ನು ಮುಂದೆ ಇರಿಸುತ್ತಾನೆ)

**ದಮಯಂತಿ:**—(ಪತ್ರವನ್ನೋದಿ ಮೂರ್ಛಿತಳಾಗಿ ಬೀಳುತ್ತಾಳೆ)

**ಸಖೀಜನರು:**—ಓ ! ಅಪ್ಪಯ್ಯಾ !!! ದಮಯಂತಿ ! (ಎಂದು ಚೀರುತ್ತಾರೆ)

**ಚಂದ್ರಾ:**—(ದಮಯಂತಿಯ ಮೈಮೇಲೆ ಕೈಯಾಡಿಸಿ) ದಮಯಂತೀ ದಮಯಂತೀ, ಏನಾಯಿತಮ್ಮಾ !! ?

**ಮಂಜು:**— ( ದಮಯಂತಿಯ ಗದ್ದವನ್ನು ಹಿಡಿದು ) ಸ್ಮೃತಿಯೇ ಇಲ್ಲ !!! ವಸುಮತಿ, ಆ ಹಾಳು ಪತ್ರದಲ್ಲಿ ಏನಿದೆ ನೋಡಮ್ಮಾ !

**ರಾಜಾ:**—(ಉದ್ವೇಗದಿಂದ ದಮಯಂತಿಯ ಸಮೀಪಕ್ಕೆ ಬಂದು ಸಖಿಯರನ್ನು ಕುರಿತು ) ಬಾಲೆಯರೆ, ಭಯಪಡಬೇಡಿರಿ ! ಈ ಕೋಮಲಾಂಗಿಗೆ ತುಸು ಮೂರ್ಛೆ ಮಾತ್ರ ಬಂದಿದೆ. ಮತ್ತೇನಾಗಿಲ್ಲ. (ತನ್ನ ಸೆಲ್ಲೆಯಿಂದ ದಮಯಂತಿಗೆ ಗಾಳಿ ಹಾಕುತ್ತಾನೆ.)

**ಚಂದ್ರಾ:**—(ದಮಯಂತಿಯ ಮುಖವನ್ನು ನೋಡಿ) ಅಪ್ಪಯ್ಯಾ ! ನಾನಿನ್ನು ಹೇಗೆ ಮಾಡಲಿ !!

**ರಾಜಾ:**— ( ಚಂದ್ರಾವಲಿಯನ್ನು ಕುರಿತು ) ಕೋಮಲಹೃದಯಳೆ, ಚಿಂತೆಮಾಡಬೇಡ ! ಕಲಶದಲ್ಲಿ ತುಸು ಪನ್ನೀರು ತಂದು ಈ ನಿಮ್ಮ ಸಖಿಯ ಮುಂದಲೆಗೆ ಹಾಕಿ ಕಣ್ಣುಗಳಿಗೂ ತುಸು ತಗಲಿಸು. ಈ ಭೀರುವು ಬೇಗನೆ ಎಚ್ಚರೆಯುವಳು. (ಚಂದ್ರಾವಲಿಯು ಹೋಗುತ್ತಾಳೆ)

**ಮಂಜು:**—(ಸಂದೇಶ ಪತ್ರವನ್ನೋದಿ) ಮಹಾರಾಜರೆ, ನಮ್ಮ ಸಖಿಯ ಮನೋಗತವು ನಿಮಗೆ ಚನ್ನಾಗಿ ತಿಳಿದಿದ್ದರೂ ನೀವೇ ಇಂಥ ದುರ್ಧರವಾದ ಸಂದೇಶವನ್ನು ತರಬಹುದೆ ?

**ರಾಜಾ:**—ಸಾಧ್ವಿ, ನೀನಾಡುವದು ಯಥಾರ್ಥವು ! ನಾನು ಮೋಸಕ್ಕೊಳಗಾಗಿ ಈ ಘೋರತರವಾದ ಕೃತ್ಯವನ್ನು ಮಾಡಿದೆನು. (ಎಂದು ಉಸುರ್ಗರೆದು ದಮಯಂತಿಯ ಮುಖವನ್ನು ನೋಡಿ)

ರಾಗ—ತಿಲಂಗ : ಧಾಟಿ—'ಅಪನೆ ಸೋ ಲಗಿನ ಮೋರಿ ಲಾಗಿರೆ'

ಏಮಲೆ ನೀನಿನಿತು ತಳೆದೇತಕೆ ।
ಪ್ರೇಮವಿದನು ಗುಣಹೀನನಲಿ ॥ ಪಲ್ಲ ॥
ಮದಗಜನದಯನು ಪದುಮಿನಿಯು ಕೇಳ— ।
ಲದು ಮರೆಪು ಲೋಲೆ ಮೃದು ಸರೋಜಮಾಲೆ ।
ಅದೆ ಕಳಿಕರವೊಳು ಭೂಷೆಯಾಪವ್ವೊಲು ॥ ೧ ॥

**ಚಂದ್ರಾ:**—(ಪ್ರವೇಶಿಸಿ ಪನ್ನೀರು ತಂದು ದಮಯಂತಿಯ ಮುಂದೆಲೆಗೆ ಹಾಕಿ) ದಮಯಂತೀ, ಎಚ್ಚರ ಬಂದಿತೇನಮ್ಮಾ? (ವಿಷಾದದಿಂದ) ಓ ಇಲ್ಲಾ! ಇನ್ನೂ ಇಲ್ಲಾ!!

**ರಾಜಾ:**—(ದಮಯಂತಿಗೆ ಗಾಳಿ ಹಾಕುತ್ತ) ಪ್ರಿಯೆ, ಅಭಿಮಾನ ಶೂನ್ಯನಾದ ನನ್ನ ಮುಖವನ್ನು ನೋಡಬಾರದೆಂದೇ ನೀನು ಕಣ್ಣು ತೆರೆಯುವದಿಲ್ಲವಲ್ಲೆ!

**ಮಂಜು:**—(ದಮಯಂತಿಯ ಕಣ್ಣಿಗೆ ನೀರು ತಗಲಿಸಿ) ದಮಯಂತೀ, ಹೇಗಿದೆ ಅಮ್ಮ?

**ರಾಜಾ:**—(ಉತ್ಸಾಹದಿಂದ) ಅಕೋ! ನೋಡಿರಿ, ಈ ಶಶಿಮುಖಿಯು ಎಚ್ಚರವನ್ನು ತಳೆಯಲಾರಂಭಿಸಿದಳು.

ಧಾಟಿ:—'ಆರು ಹಿತದವರಹುದು ಮೂವರೊಳಗೆ.'

ಮೋಹವಂ ನೀಗಿದಳು ಚಾರುವದನೆ।
ರಾಹುವಿಂ ಮೋಚನವ ತಾಳ್ದ ಶಶಿಬಿಂಬದೊಲ್ ॥ ಪ ॥
ನೂಕಿ ತಮವನು ರಾತ್ರಿ ಚಂದ್ರಸಿಂ ಮೆರೆಯುವೊಲ್।
ಪ್ರಾಚಿ ಅರುಣನ ಕೂಡಿ ಬೆಳಗುತಿರುವೊಲ್॥
ಈಕೆ ಮುಖಕಾಂತಿಯಂ ತಳೆಯುತೀಗಲೆ ತನ್ನ
ಲೋಚನಾಂಬುಜಗಳನು ತೆರೆದು ನೋಳ್ಪಳ್ ॥ ೧ ॥

**ದಮಯಂತಿ:**—(ಒಂದು ಮಗ್ಗಲಿನಿಂದ ಮತ್ತೊಂದು ಮಗ್ಗಲಾಗುತ್ತಾಳೆ)

**ಚಂದ್ರಾ:**—(ಆನಂದದಿಂದ) ನೋಡಿದಿರಾ! ಇವಳು ಮಗ್ಗಲಾದಳು! ಇನ್ನೇನು ಭಯವಿಲ್ಲ!!!

**ಮಂಜು:**—ಇದು ನೋಡಿರಿ! ಇವಳು ಅರೆಗಣ್ಣು ತೆರೆದು ಮತ್ತೆ ಮುಚ್ಚಿದಳು!!! ದಮಯಂತೀ, ಎಚ್ಚರ ಬಂದಿತೇ ನಿನಗೆ?

**ದಮಯಂತಿ:**—(ಕಣ್ಣು ಮುಚ್ಚಿದಲ್ಲಿಯೇ) ಚಂದ್ರಾವಲಿ, ಮಹಾರಾಜರು ಇಂದಿನ ಬಳಿಗೆ ಹೋದರೇನು?

**ಚಂದ್ರಾ**:—ಇಲ್ಲವಮ್ಮಾ! ಅವರು ನಿನಗಾದ ಅವಸ್ಥೆಯನ್ನು ಕಂಡು ವ್ಯಸನಾಕುಲರಾಗಿ ನಿನ್ನ ಬಳಿಯಲ್ಲಿಯೇ ಕುಳಿತಿದ್ದಾರೆ. ಚೆನ್ನಾಗಿ ಕಣ್ಣು ತೆರೆದು ನೋಡು!

**ದಮಯಂತಿ**:—(ಕಣ್ಣು ತೆರೆದು ನೋಡಿ) ನನ್ನನ್ನು ಮೂರ್ಛೆಯಿಂದ ಯಾಕೆ ಎಬ್ಬಿಸಿದರಿ?

**ವಸುಮತಿ**:—ಹಾಗಂದರೇನು ದಮಯಂತೀ! ಚನ್ನಾಗಿ ಎಚ್ಚತ್ತಿಯೇನು?

**ದಮಯಂತಿ**:—ನನಗೇನಾಗಿದೆ? ಯಾಕೆ ಸುಮ್ಮನೆ ಕಾಡುತ್ತೀರಿ? (ರಾಜನನ್ನು ಕಂಡು ನಾಚಿ ಸೆರಗು ಸಮಮಾಡಿಕೊಳ್ಳುತ್ತಾಳೆ)

**ಚಂದ್ರಾ**:—ಇಲ್ಲಿ ನೋಡು ದಮಯಂತೀ, ಮಹಾರಾಜರು ನಿನಗಾದ ವ್ಯಥೆಯನ್ನು ನೋಡಿ ಹೇಗೆ ಚಿಂತಾಕುಲರಾಗಿ ಕುಳಿತಿದ್ದಾರೆ.

**ದಮಯಂತಿ**:—ಪಾಪ! ಇಂದ್ರನ ಸಂದೇಶಕ್ಕೆ ನಾನು ಉತ್ತರವನ್ನು ಕೊಡಲಿಲ್ಲವೆಂದು ಚಿಂತಾಕುಲರಾಗಿದ್ದರು!!

**ರಾಜಾ**:— ರಾಗ—ಬಹಾರ

ಧಾಟಿ:—'ಫುಲವಾಲಿಕಂತ ಮ್ಯೆಕಾ'

ದೀನನೊಳು ಪಂಥವೇನೆ ವಿಧೇಯನಿಹೆನೆ ಮೋಹನಾಂಗಿ ॥ ಪ ॥
ಸದಯ ಹೃದಯೆ ನೀಂ ಸೇವಾಪರನೊಳ್ ಪ್ರಕೋಪಿಸುವರೆ ॥ ೧ ॥
ಮೃದಲ ತನುವಿನೊಳ್ ತಾಂ ಸೇರುವದೆ ಕಠೋರತೆಯು ಪೇಳ್ ॥ ೨ ॥
ಸುಧೆಯೊಳಿರುವದೆ ಹಾಲಾಹಲವು ವಿರೋಧವಿದು ಕೇಳ್ ॥ ೩ ॥

**ದಮಯಂತಿ**:—ವಸುಮತಿ, ನಾನು ಇಂದ್ರನ ಸಂದೇಶವನ್ನು ನಿರಾಕರಿಸಿದೆನೆಂದು ಆತನ ದೂತರಿಗೆ ಹೇಳಿ ಅಪ್ಪಣೆ ಕೊಟ್ಟುಬಿಡು!

**ರಾಜಾ**:— (ಸಂತೋಷದಿಂದ) ಉದಾರಚರಿತೆ, ನೀನು ಇಂದ್ರನ ಸಂದೇಶವನ್ನು ನಿರಾಕರಿಸಿದ ಮಾತ್ರದಿಂದಲೇ ಈ ನಲರಾಜನು ನಿನ್ನ ದಾಸನಾಗಿರುವನು.

**ದಮಯಂತಿ**:—(ಕಿಂಚಿತ್ ಮಂದಸ್ಮಿತೆಯಾಗಿ) ಪಂಡಿತರನ್ನು ವಂಚಿಸಬಲ್ಲ ರಾಜನೀತಿಜ್ಞರಿಗೆ ಮುಗ್ಧೆಯರನ್ನು ವಂಚಿಸುವದು ಹೆಚ್ಚಿನ ಮಾತೆ?

**ರಾಜಾ**:—ಸುಂದರಿ, ನಾನು ವಂಚಕನಲ್ಲ ಕಂಡಿಯಾ !

ರಾಗ—ಮಾಲಕಂಸ; ಧಾಟಿ—'ಮುಖ ಮೋಡ ಮೋಡ ಮುಸಕಾತ'

ಮನಮೋಲ್ದು ಸೋಲ್ದು ಸಿಲುಕಿತೆ ಸುಹಾಸೆ ।
ನಿನ್ನೊಳಿನಿತು ರಾಮೆ ಸರಸಿಜ ಸುವಾಸೆ ॥ ಪಲ್ಲ ॥
ಭ್ರಮರವು ಕಮಲೋದರದೊಳ್ ನಲಿದಾಡಿ ॥
ಪ್ರೇಮದಿ ತಾಂ ಗುಂಜಿಸುತಿರಲಾಗಿ,
ನಭೋಗಾಮಿ ಸೆರೆಯಾದ ಹಾಗೆ ॥ ೧ ॥

**ದಮಯಂತಿ**:— (ಅವನತಮುಖಿಯಾಗಿ ನಗುತ್ತ) ವಸುಮತಿ ಈ ದಂಭವನ್ನು ನೋಡಿದೆಯಾ ? ಮಹಾರಾಜರು ಆಡಿತೋರಿಸಿದಂತೆ ಅವರ ಮನಸ್ಸಿನ ಸ್ಥಿತಿಯಾಗಿದ್ದರೆ ಇಂದ್ರನ ಅನಿಷ್ಟವಾದ ಸಂದೇಶವನ್ನು ನಾವು ಕೇಳುತ್ತಿದ್ದೆವೆ ?

**ರಾಜಾ**:—ಮಾನಿನಿ, ಮೋಸಕ್ಕೊಳಗಾಗಿ ನಾನು ಇಂದ್ರನ ದೂತ ನಾದೆನು. ಈಗ ಸರ್ವಥಾ ನಿನ್ನ ದಾಸನೇ ಆಗಿರುವೆನು. ಅನುಗ್ರಹಿಸಿ ಆನಂದವನ್ನೀಯುವುದಾಗಲಿ, ನಿರಾಕರಿಸಿ ಶಾಶ್ವತವಾದ ದುಃಖದಲ್ಲಿ ಮುಳಗಿಸಿ ಬಿಡುವದಾಗಲಿ ನಿನ್ನ ಸ್ವಾಧೀನದ ಮಾತು !! ಬೇಕಾದ ಹಾಗೆ ಮಾಡು.

**ಚಂದ್ರಾ**:—ನಿರ್ಮಲವಾದ ಸರೋವರದ ತಳವು ಸ್ಪಷ್ಟವಾಗಿ ಕಾಣು ತ್ತಿರುವಂತೆ ಮಹಾರಾಜರ ಹೃದ್ಗತವು ಚನ್ನಾಗಿ ವ್ಯಕ್ತವಾಗಿರುವದು. ನೀನು ವ್ಯರ್ಥವಾಗಿ ಅವಿಶ್ವಾಸವನ್ನು ತಳೆಯಬೇಡ, ದಮಯಂತೀ !

**ದಮಯಂತಿ**:—ನೀವೆಲ್ಲರೂ ಹೊಣೆಯಾಗಲಿಕ್ಕೆ ಸಿದ್ಧರಾಗಿರಲು ನಾನಾದರೂ ನಂಬಲೇಬೇಕು. (ಎಂದು ಮಂದಸ್ಮಿತೆಯಾಗಿ ರಾಜನನ್ನು ಪ್ರೇಮ ಕಟಾಕ್ಷದಿಂದ ನೋಡುತ್ತಾಳೆ)

**ರಾಜಾ**:—ಪ್ರಿಯೆ, ನನ್ನಲ್ಲಿ ವಿಶ್ವಾಸವನ್ನಿಡಬೇಕಾದರೆ ಅನ್ಯರ ಹೊಣೆ ಏಕೆ ? ಈ ದಾಸನು ಏನು ಮಾಡಬೇಕೆಂಬದನ್ನು ಹೇಳು (ಅಂಜಲೀಬದ್ಧ ನಾಗಿ ನಿಲ್ಲುತ್ತಾನೆ)

**ದಮಯಂತಿ**:— ( ಅವನತಮುಖಿಯಾಗಿ ಮುಗುಳುನಗೆ ನಗುತ್ತ ) ಅಜ್ಞಾನಿಯಾದ ಅಬಲೆ ನಾನು ! ತಿಳಿಯದೆ ಏನಾದರೂ ಆಡಿದರೆ ಮಹಾ ರಾಜರು ಕ್ಷಮಿಸಬಾರದೇನು ?

ಧಾಟಿ—ಸುಖಸಾರ ಸಭೆಗೆ ನಾ ಬಂದೆ ॥

ದಯದೋರಿ ಕ್ಷಮಿಸು ರಾಜೇಂದ್ರಾ ॥
ಪ್ರಿಯ, ನಾನು ಕೋರುವೆ ಮನೋದಧಿ ಚಂದ್ರಾ ॥ ಪ ॥
ಲೀಲೆಯಿಂದಲಿ ಹಾಗೆ ಚಾಳಿಸಿ ನುಡಿದೆನು ।
ಪಾಲಿಸು ನಾನನುಕೂಲೆಯು ನಿನಗೆ ॥ ೧ ॥

**ರಾಜಾ:**—ಪ್ರಾಣೇಶ್ವರಿ, ನಿನ್ನೀ ವಚನಾಮೃತದಿಂದ ನಾನು ಸಂತೋಷಭರಿತನಾಗಿ ಕೃತಕೃತ್ಯನಾದೆನು. ಇಂದಿಗೆ ಜಗತ್ತಿನಲ್ಲಿ ನಾನೇ ಸುಖಿಯು ! ನಾನೇ ಕೃತಿಯು !!!

**ದಮಯಂತಿ:**—ಇಂದ್ರನ ಅನಿಷ್ಟವಾದ ನಿಯೋಗವೇ ಈಗ ಪ್ರಸಾದ ವಾಯಿತು.

[ತೆರೆಯಲ್ಲಿ ಓರ್ವ ದಾಸಿಯು ಕೂಗುತ್ತಾಳೆ]

**ಚಂದ್ರಾ:**—(ದಾಸಿಯನ್ನು ಕುರಿತು) ಯಾರು, ಚಪಲೆ !

**ದಾಸಿ:**—(ತೆರೆಯಲ್ಲಿ) ದಮಯಂತೀ ದೇವಿಯರನ್ನೂ ಸಖೀಜನರನ್ನೂ ರಾಣಿಯವರು ತಮ್ಮ ಸನ್ನಿಧಾನಕ್ಕೆ ಕರೆದಿದ್ದಾರೆ.

**ಚಂದ್ರಾ:**—ಮಹಾರಾಜರು ಇಲ್ಲಿರಲು, ಬಾಗಿಲವನ್ನು ತೆಗೆಯುವದು ಹೇಗೆ ?

**ವಸುಮತಿ:**—(ದಾಸಿಯನ್ನು ಕುರಿತು) ಚಪಲೆ, ನಾವೀಗಲೆ ಬಂದೆವು. ಹೋಗು ! ರಾಣಿಯವರಿಗೆ ನಿವೇದಿಸು.

**ಚಂದ್ರಾ:**— ಮಹಾರಾಜರಂಥ ಮಹಾನುಭಾವರು ಅತಿಥಿಗಳಾಗಿ ಇಲ್ಲಿಗೆ ಬಂದಿರಲು ನಮ್ಮಿಂದ ತಕ್ಕದಾದ ಸತ್ಕಾರವಾಗಲಿಲ್ಲ ! ಅದಕ್ಕಾಗಿ ನಮಗೆ ಖೇದವಾಗಿದೆ.

**ರಾಜಾ:**—ಸೂಜ್ಞಳೆ, ನನ್ನ ಮನೋರಥವೇ ಸಿದ್ಧವಾಗಿರಲು ಉಪ ಚಾರಗಳ ಪ್ರಯೋಜನವೇನು ? ನನಗಿನ್ನು ಅಪ್ಪಣೆ ಕೊಡಿರಿ. ಇಂದ್ರನಿಗೆ ಈ ಮಾನಿನಿಯ ಉತ್ತರವನ್ನು ತಲ್ಪಿಸಿ ನಿಶ್ಚಿಂತನಾಗುವೆನು.

**ವಸುಮತಿ:**—ಮತ್ತೆ ದರ್ಶನಲಾಭವಾಗುವದಷ್ಟೆ ?

**ರಾಜಾ:**—ನನ್ನ ಜೀವವೇ ಇಲ್ಲಿರುವದು. ಅನಿರ್ವಾಹಕ್ಕಾಗಿ ಈ ದೇಹವನ್ನು ಮಾತ್ರ ಕಟ್ಟಿಕೊಂಡು ಹೋಗಬೇಕಾಗಿದೆ.

ರಾಗ—ಕೇದಾರಗೌಳ; ಆದಿತಾಲ.

ಧಾಟಿ—'ಹರಿರಿಹ ಮುಗ್ಧವಧೂನಿಕರೇ'

ದಯಿತೆಯ ಸಂಶ್ರಯವೇ ಸುಖವೇ ।
ವಿಯೋಗವು ಮನಕಿದು ಘಾತಕವೇ ॥ ಪಲ್ಲ ॥
ಮಂಜುಲವಾಣಿಯು ಪ್ರೇಮವಿಲಾಸದಿ ಭಾವವಿಡುವ ನುಡಿಯಾಡೆ ॥
ಪ್ರಾಂಜಲಿಯಾಗುತೆ ಕಾಂತೆಯ ಸೇವೆಯ ಮಾಡುವೆನೇ ಸ್ತುತಿ ಮಾಡಿ ॥ ೧ ॥

(ಹೋಗುತ್ತಾನೆ)

**ವಸುಮತಿ:**—ಹೋಗೋಣ ನಡೆಯಿರಿನ್ನು; ಮಹಾರಾಣಿಯವರು ನಮ್ಮ ಮಾರ್ಗಪ್ರತೀಕ್ಷೆ ಮಾಡುತ್ತಿರುವರಾದೀತು !

**ಮಂಜು:**—ನಡಿ, ದಮಯಂತೀ ! ಸುಮ್ಮನೆ ವಾತಾಯನದಲ್ಲಿ ಏನು ನೋಡುವಿ ? ಮಹಾರಾಜರು ಅಲ್ಲೇನು ನಿಂತಿರುವರೆ ?

**ದಮಯಂತಿ:**—ಎಲ್ಲಿಗೆ ಹೋಗವದು ಮಂಜುಘೋಷೆ ?

**ಮಂಜು:**— ಮತ್ತಿನ್ನೆಲ್ಲಿಗೆ ! ಮಹಾರಾಜರಂತೂ ನಿನ್ನನ್ನು ಬಿಟ್ಟು ಹೋದರು. ರಾಣಿಯವರ ಬಳಿಗೆ ಹೋಗತಕ್ಕದ್ದು.

**ವಸುಮತಿ:**—ಹಾಗೇಕೆ ಮಂಜುಘೋಷೆ ? ಮಹಾರಾಜರು ತಮ್ಮ ದೇಹವನ್ನು ಕಟ್ಟಿಕೊಂಡು ಹೋದರೂ ಪ್ರಾಣವನ್ನು ದಮಯಂತಿಯ ಬಳಿಯಲ್ಲಿ ಒತ್ತೇ ಇಟ್ಟು ಹೋಗಿರುವರು.

**ದಮಯಂತಿ:**— (ತನ್ನಷ್ಟಕ್ಕೆ)

ಧಾಟಿ—'ಮಜ ನಾಹೀ ಗಡೆ ಸೌಖ್ಯ'

ಒಳಿತೇನೊ ಪ್ರಿಯಾ ನಂಬಿರೆ ನಾಂ, ಮೋಹಜಾಲದಿ ।
ಪೇಳೆಲೊ ನೀಂ ಮಾನಸವಪಹಾರ ಮಾಡಿದಿ ॥ ಪಲ್ಲ ॥
ಶೂನ್ಯಮನೋಭಾವಳಿನ್ನು ಭ್ರಾಂತಳಂತೆ ನಾ ।
ನೇನು ಮಾಳ್ಪೆ-ನಾಡುವೆನೇನೆಂಬದರಿಯೆನು ॥
ಮನಚೋರಾ, ತನುವನು ನೀಂ ಕದಿಯಲಾರಿಯಾ ।
ನಾನೆರವಾಗುತ್ತಲಿದ್ದೆ ನಿನಗೆ ಚೌರ್ಯದಿ ॥ ೧ ॥

( ತೆರೆ )

## ನಾಲ್ಕನೆಯ ಪ್ರವೇಶವು

### ಸ್ಥಳ—ರಾಜಮಾರ್ಗ

(ವಸುಮತಿ ಮಂಜುಘೋಷೆಯರು)

**ಮಂಜು:**—ವಸುಮತೀ, ಇಷ್ಟು ಅವಸರದಿಂದ ಎಲ್ಲಿಗೆ ನಡೆದಿ ?

**ವಸುಮತಿ:**—(ನಕ್ಕು) ಸಂಜೆಯಾಯಿತು ! ಮನೆಗೆ ಹೋಗಬೇಡವೆ?

**ಮಂಜು:**—ಹೋಗುವಿಯಂತೆ! ಅಷ್ಟೇಕೆ ಅವಸರ? ದಮಯಂತಿಯ ಕಲ್ಯಾಣೋತ್ಸವಗಳು ನಡೆದಿರುವಾಗ ಕಿಂಚಿತ್ ತಡವಾಗಿ ಮನೆಗೆ ಹೋದರೆ ನಿಮ್ಮ ಪತಿರಾಜರು ಕೋಪಿಸಿಕೊಳ್ಳಲಿಕ್ಕಿಲ್ಲ !!

**ವಸುಮತಿ:**— ಆಹಾಹಾ !!! ಆಚಾರ ಹೇಳುವವಳು ನೀನೇಕೆ ಮೂರುಸಂಜೆಯಲ್ಲಿ ಹಿಕ್ಕಿ ಹೆಣಿಲು ಹಾಕಿಕೊಂಡಿರುವಿ ? ತುರುಬಿಗೆ ಆ ಅಂದವಾದ ಹೂಮಾಲೆಯೇಕೆ ? ಜರದ ಸೀರೆಯನ್ನು ತೀಡಿ ಉಟ್ಟುಕೊಂಡು ಒಯ್ಯಾರದಿಂದ ಮೆಲ್ಲಡಿಗಳನಿಕ್ಕುತ್ತ ನೀನೆಲ್ಲಿಗೆ ನಡೆದಿರುವಿ ಹೇಳಬಾರದೆ ?

**ಮಂಜು:**—ನಾನು ದಮಯಂತಿಯ ಊಟಣಿಯ ಸಮಾರಂಭಕ್ಕೆ ಹೊರಟಿರುವೆನು.

**ವಸುಮತಿ:**—ನಡೆ ನಾನೂ ಬರುವೆನು. ನಿನ್ನೆ ಸ್ವಯಂವರಮಂಟಪಕ್ಕೆ ಬರುವದು ನನಗಾಗಲಿಲ್ಲ.

**ಮಂಜು:**—ಒಳ್ಳೇ ಮಹೋತ್ಸವವನ್ನು ಕಳಕೊಂಡಿ ! ಸ್ವಯಂವರ ಮಂಟಪದ ಶೃಂಗಾರವೇನು ! ದೀಪೋತ್ಸವಗಳೇನು ! ನೃತ್ಯಗಾಯನ ಗಳೇನು ! ನಾನಾ ದಿಗ್ದೇಶಗಳಿಂದ ಬಂದ ರಾಜಕುಮಾರರ ವೇಷಾಲಂಕಾರ ಗಳ ವೈಚಿತ್ರ್ಯವೇನು ! ನೋಡಲಿಕ್ಕೆ ಎರಡು ಕಣ್ಣುಗಳೇನು ಸಾಲಲಿಲ್ಲ !!

**ವಸುಮತಿ:**—ಆ ಸಮಯದಲ್ಲಿ ದಮಯಂತಿಯು ಒಳ್ಳೇ ಸೌಭಾಗ್ಯ ಸಂಪನ್ನೆಯಾಗಿ ತೋರಿದ್ದಾಳಲ್ಲಿ ?

**ಮಂಜು:**— ದಮಯಂತಿಯು ಕೈಯ್ಯಲ್ಲಿ ಅಂದವಾದ ಹೂಮಾಲೆ ಯನ್ನು ತೆಗೆದುಕೊಂಡು ಕನಕಪುತ್ಥಳಿಯಂತೆ ರಾಜಕುಮಾರರ ಸಾಲುಗಳ ಮಧ್ಯದಲ್ಲಿ ಮೆಲ್ಲನೆ ಬರುತ್ತಿರುವಾಗ

ಧಾಟಿ:—'ಬಾರೊ ಬಾರೊ ಬಾರೊ ಮನಗೆ.'

ನೋಡಿ ಮೋಹವಾಯ್ತು ಜನಕೆ। ನೋಡಿ......||
ರೂಢಿಗೆ ಮಿಗಿಲಾದ ವಧುವ || ಪಲ್ಲ ||
ಲೋಲೆಯು ಮೃದುಪದದಿ ಬರಲು। ಕಾಲುಸರದ ಸನಿಯ ನುಡಿಯ-।
ನಾಲಿಸಿ ರಣಧೀರರೆಲ್ಲಕ। ಲ್ಲೋಲಹೃದಯರಾದರಾಗ || ೧ ||
ಕಾಮನ ಶರತತಿಯನೇನು। ಭಾಮಿನಿ ಸರದೊಳಗೆ ಕಟ್ಟಿ।
ನೇಮದಿ ಪರಮೇಶನನ್ನು ರತಿ। ದೇವಿ ಜಯಿಸಬಂದಳೆಂದು || ೨ ||

**ವಸುಮತಿ:**—ಪಾಣಿಗ್ರಹಣದ ಕಾಲದಲ್ಲಿ ಆ ವಧೂವರರ ಮನೋವೃತ್ತಿಯು ಬಹು ಚಮತ್ಕಾರವಾಗಿ ಕಂಡಿದ್ದೀತು!

**ಮಂಜು:**—ಧಾಟಿ—'ಬಹುನೀಪತರೂ ಫುಲ್ಲುನಿ ಡುಲತಿ'

ಸಖಿ, ಶೋಭೆಯನೇಂ ಪೊಗಳಲಸನೆ?
ನೋಡಿ ನಾನು ಧನ್ಯಳಾದೆನೆ || ಪಲ್ಲ ||
ವಧು ಕರವನು ಪಿಡಿದು ಮನೋಭವನ ಚೇಷ್ಟೆಯಿಂ-
ದಾದನು ಶೀತಾಂಶು ಸಮನು ರೋಮಹರ್ಷಿತಂ ||
ಮದನೋತ್ಸವ-ವದನೆ ವಿಲೋಭಿಸಿತು ನಯನವಾ...... ವಿಲೋ ||
ಚಂದ್ರಕಾಂತ ಮಣಿಯು ಸೋಮಕರದ ಯೋಗದಿ।
ತಾಂ ದ್ರವಿಸುವ ಪರಿ ಬೆವರನಾಂತಳಾ ರಮಣೀ ರನ್ನೆ || ೧ ||

(ಚಪಲೆಯು ಪ್ರವೇಶಿಸುತ್ತಾಳೆ)

**ಚಪಲಾ:**—ಎಷ್ಟು ಹುಡುಕಬೇಕು ನಿಮ್ಮನ್ನು? ಊಟಣಿಯ ಕೆಲಸವು ನಿಮಗೋಸ್ಕರವಾಗಿ ತಡೆದುನಿಂತಿದೆ. ನಿಮ್ಮನ್ನು ಎಲ್ಲಿದ್ದಲ್ಲಿಂದ ಹಿಡಿದು ತರಬೇಕೆಂದು ರಾಣಿಯವರು ಆಜ್ಞಾಪಿಸಿರುವರು.

**ವಸುಮತಿ:**—ನಡೆ ನಾವೂ ಅತ್ತ ಕಡೆಗೇ ಬರುತ್ತೇವೆ.

**ಮಂಜು:**—ಕಾಣುವುದಿಲ್ಲವೆ?

(ತೆರೆ)

## ಐದನೆಯ ಪ್ರವೇಶವು

ಗ್ರಾಮಾಂತರದ ಮಾರ್ಗ

(ಮೂವರು ಬ್ರಾಹ್ಮಣರು)

**ಭಿಕ್ಕಂಭಟ್ಟರು:**—ನಮಸ್ಕಾರ, ರಂಗಾಚಾರ್ಯರೆ ! ಬಾಳದೀಕ್ಷಿತರೇ ನಮಸ್ಕಾರ ! ಎಲ್ಲಿಗೆ ಪ್ರಯಾಣ ?

**ರಂಗಾ:**—ನಮಸ್ಕಾರ, ಭಿಕ್ಕಂಭಟ್ಟರೆ ! ನಮ್ಮ ನಮ್ಮ ಗ್ರಾಮಗಳಿಗೆ ಹೊರಟಿದ್ದೇವೆ.

**ಭಿಕ್ಕಂ:**—ನೀವಿಬ್ಬರೂ ಒಳ್ಳೇ ಉಬ್ಬಿನಲ್ಲಿರುವಿರಿ. ವ್ರತ ಉದ್ಯಾಪನೆ ಗಳನ್ನು ಸಾಧಿಸಿಕೊಂಡಂತೆ ಕಾಣುತ್ತದೆ !!!

**ಬಾಳ:**—ವ್ರತ ಉದ್ಯಾಪನೆಗಳಂತೆ ! ಭಟ್ಟರೆ, ಗುಡ್ಡ ಹಣ್ಣಾಗಿತ್ತು ! ಗುಡ್ಡಾ !!!

**ಭಿಕ್ಕಂ:**—ಏನದು ?!!

**ರಂಗಾ:**—ಎಲ್ಲಿದ್ದಿರಿ ಭಟ್ಟರೆ ? ರಾಜಕುಮಾರಿಯಾದ ದಮಯಂತೀ ದೇವಿಯ ವಿವಾಹಮಹೋತ್ಸವಮಾಯಿತಷ್ಟೆ ? ದಕ್ಷಿಣೆಯೆಷ್ಟು ! ದೇಕಾರ ವೆಷ್ಟು !! ಸಮಗ್ರ ಎಂಟೂನೆಂಟು ದಿವಸ ಪಕ್ವಾನ್ನಗಳ ಭೋಜನವೇ ಭೋಜನವು !!!

**ಬಾಳ:**— ಅದನ್ನೇನು ಮಾಡುತ್ತೀರಿ ! ಸ್ವಯಂವರಕ್ಕೆ ಪ್ರತ್ಯಕ್ಷ ಇಂದ್ರಾದಿ ದೇವತೆಗಳೇ ಬಂದಿದ್ದರು. ವಿದರ್ಭನಗರವು ಸ್ವರ್ಗವೇ ಆಗಿತ್ತು. ಎಲ್ಲಿಗೆ ಹೋಗಿದ್ದಿರಿ ಭಟ್ಟರೆ ನೀವು ?

**ಭಿಕ್ಕಂ:**—ಹೋಗಿದ್ದೆ ಹಾಳಾಗಿ !! ಹೊಲದ ರೊಕ್ಕಕ್ಕೆ ಹೋದವನು ಮುಳ್ಳೂರ ಶಾನುಭೋಗರ ಮುದುಕೆಯ ವಿಷ್ಣುಪಂಚಕದ ಆಸೆಗಾಗಿ ನಿಂತು ಕೊಂಡೆನು ! ಪ್ರತ್ಯಕ್ಷ ಇಂದ್ರಾದಿ ದೇವತೆಗಳನ್ನು ನೋಡಿದಿರಾ ? ಧನ್ಯರು ನೀವು !!! ದೇವತೆಗಳೇಕೆ ಬಂದಿದ್ದರು ?

**ರಂಗಾ:**— ನಮ್ಮ ರಾಜಕುಮಾರಿಯಾದ ದಮಯಂತೀದೇವಿಯು ಶಚಿದೇವಿ ಮೊದಲಾದ ದೇವಾಂಗನೆಯರಿಗಿಂತಲೂ ಮಿಗಿಲಾದ ರೂಪವತಿ ಯೆಂದು ಕಂಡು ಸ್ವಯಂವರದಲ್ಲಿ ದಮಯಂತಿಯ ಕೈಯಿಂದ ಕೊರಳಿಗೆ ಮಾಲೆ ಹಾಕಿಸಿಕೊಳ್ಳಬೇಕೆಂದು ಬಂದಿದ್ದರು.

ಭಿಕ್ಕಂ:—ಸರಿ ಸರಿ!! ನಮ್ಮ ದಮಯಂತೀದೇವಿಯು ಅಂಥ ಯೋಗ್ಯತೆ ಯುವಳೇ ! ಅವಳು ಯಾರ ಕೊರಳಿಗೆ ಮಾಲೆ ಹಾಕಿದಳು ?

ಬಾಳ:— ದೇವತೆಗಳಿಗೆ ಸಮಾನವಾದ ರೂಪವಂತನೂ ವರ್ಚಸ್ವಿಯೂ ಆದ ನಿಷಧ ಚಕ್ರವರ್ತಿಯ ಕೊರಳಿಗೆ ಅವಳು ಮಾಲೆ ಹಾಕಿದಳು.

ರಂಗಾ:—ನಾನು ಹೇಳುತ್ತೇನೆ ಕೇಳಿರಿ ! ನಿಷಧ ದೇಶದ ನಲ ಚಕ್ರವರ್ತಿಯ ದಿವ್ಯವಾದ ರೂಪವನ್ನು ಕಂಡು ದಮಯಂತಿಯು ಅವನ ಕೊರಳಿಗೇ ಮಾಲೆ ಹಾಕುವಳೆಂಬ ಭೀತಿಯಿಂದ, ಇಂದ್ರ, ವರುಣ, ಅಗ್ನಿ, ಯಮ, ಹೀಗೆ ನಾಲ್ಕು ಜನ ದೇವತೆಗಳು ತಾವೂ ನಲರಾಜನ ರೂಪವನ್ನು ಧರಿಸಿ ಸ್ವಯಂವರಮಂಟಪಕ್ಕೆ ಬಂದಿದ್ದರು.

ಭಿಕ್ಕಂ:—ನಲಚಕ್ರವರ್ತಿಯಂತೂ ಸರಿಯೇ ಸರಿ ! ನಾಲ್ಕು ಜನ ದೇವತೆಗಳು ನಲರೂಪಧಾರಿಗಳು; ಹೀಗೆ ಒಂದೇ ರೂಪದವರಾದ ಐವರಲ್ಲಿ ಇವನೇ ನಲನೆಂಬದನ್ನು ದಮಯಂತಿಯು ಹೇಗೆ ಅರಿತುಕೊಂಡಳು ?

ರಂಗಾ:—ಅದೊಂದು ಕಥಾಂತರವೇ ಆಯಿತು. ಆ ಸಮಯಕ್ಕೆ ಹೇಳಿ ಕರಿಸಿದವರಂತೆ ನಾರದರು ನಾರಾಯಣನನ್ನು ಕೊಂಡಾಡಿ ಹಾಡುತ್ತ ಸ್ವಯಂವರಮಂಟಪಕ್ಕೆ ಬಂದರು. ನಲರೂಪಧಾರಿಗಳಾದ ಇಂದ್ರಾದಿ ದೇವತೆಗಳ ಪ್ರಣಾಮಗಳನ್ನು ಆ ದೇವರ್ಷಿಗಳು ಮುಗುಳುನಗೆ ನಗುತ್ತ ಸ್ವೀಕರಿಸಿ, ನಿಜನಾದ ನಲರಾಜನನ್ನು ಕುರಿತು “ ನಲರಾಜ, ಅನಾಮಯವಷ್ಟೆ ? ” ಎಂದು ಕೇಳಿದರು. ಬಳಿಕವರು ದಮಯಂತಿಯ ಬಳಿಗೆ ಬಂದು “ ದೇವತೆಗಳು ನೆಲ ಮುಟ್ಟದೆ ತುಸು ಅಂತರದಲ್ಲಿ ನಿಂತಿರುವರು. ಅವರ ಕಣ್ಣುಗಳು ಎವೆ ಬಡಿಯುವದಿಲ್ಲ; ಅವರ ಕೊರಳೊಳಗಿನ ಹೂಗಳು ಬಾಡಿರುವದಿಲ್ಲ; ತಿಳಿದುಕೋ ಆಯಿತು ! ” ಎಂದು ಸೂಚಿಸಿದವರೇ ‘ ನಾರಾಯಣ ! ನಾರಾಯಣ !! ’ ಎಂದು ಗರ್ಜಿಸುತ್ತ ಋಷಿವೃಂದದಲ್ಲಿ ಸೇರಿಕೊಂಡರು.

ಭಿಕ್ಕಂ:—ಹಾಃ ಹಾಃ (ಎಂದು ನಕ್ಕು) ನಾರದರವರು !!! ದಮಯಂತಿಯು ಸಹಜವೇ ನಲರಾಜನ ಗುರುತು ಹಿಡಿದಿದ್ದಾಳು.

ಬಾಳ:—ಸಂದೇಹವೇನು ?

ಭಿಕ್ಕಂ:— ಆಚಾರ್ಯರೇ ದಕ್ಷಿಣೆ ದೇಕಾರಗಳು ಕೂಡಿ ತಲೆಗೆ ಎಷ್ಟೆಷ್ಟು ಸಿಕ್ಕಿತು ?

ರಂಗಾ:—ದಕ್ಷಿಣೆ ಬೇಕಾರ ಕೂಡಿ ತಲೆಗೆ ಐವತ್ತು ಐವತ್ತು ನಿಷ್ಕಗಳು! ಮೇಲೆ ಈ ಕಲಾಬತ್ತಿನ ಶಾಲು ಸಂಭಾವನೆ! ದೀಕ್ಷಿತರೆ, ತೋರಿಸಿರಿ ನಿಮ್ಮ ಜರದ ಪೀತಾಂಬರಾ!

ಭಿಕ್ಕಂ:—(ಹಣೆಹಣೆ ಬಡಕೊಂಡು) ಭಾಗ್ಯಹೀನನು ನಾನು !!

ಬಾಳ:—ಭಿಕ್ಕಂಭಟ್ಟರೇ ನೀವು! ಹಿರಿಯರು ಅರಿಸಿ ಹೆಸರಿಟ್ಟಿದ್ದಾರೆ!

ಭಿಕ್ಕಂ:—ಆಚಾರ್ಯರೆ, ಭೋಜನದ ವ್ಯವಸ್ಥೆ ಹೇಗಿತ್ತು ?

ರಂಗಾ:—ಕೇಳುತ್ತೀರೇನು ?

ಧಾಟಿ:—ಇಂದಿಗೆ ಭುವನಕೆ ಬಂದೇನೈ

ಅಂದಿನ ಭೋಜನದಂದವನೀಕ್ಷಿಸಿ ।
ವೃಂದಾರಕರುರೆ ಪಾಡಿದರು ॥ ಪಲ್ಲ ॥
ಸಲೆ ರಂಗೋಲಿಯ ಪಂತಿಗಳೊಳ್ ।
ಲಲನೆಯರತಿ ಹರುಷದಲೋಡಾಡುತೆ ॥
ಎಲೆಗಳ ಬಡಿಸಲು ಪಾಡಿದರು ॥ ೧ ॥
ರಸ, ಪಾಯಸಗಳು ಭಕ್ಷ್ಯಗಳು, ।
ಬಿಸಿಬಿಸಿ ಭೋಜ್ಯದ ಬಗೆಗಳು ಶಾಕದ ।
ಹೊಸಪರಿ ನೋಡುತೆ, ಪಾಡಿದರು ॥ ೨ ॥
ಶಶಿಬಿಂಬಗಳೆನೆ ಶೋಭಿಸುವ ।
ಹೊಸ ಪರಿಮಳ ಸೂಸುವ ಮೋದಕಗಳು ।
ರಸನೆಗೆ ರುಚಿಕೊಡೆ, ಪಾಡಿದರು ॥ ೩ ॥

ಭಿಕ್ಕಂ:—ಆಚಾರ್ಯರೆ, ಬಾಯಿಗೆ ನೀರು ಬರುವಂತೆ ಹೇಳಿದಿರಿ ಕಂಡಿರಾ! ಇನ್ನು ನಮ್ಮ ಗತಿಯೇನು?

ರಂಗಾ:—ನಾವೇನು ಹೇಳೋಣ ?

ಬಾಳ:—ಭಿಕ್ಕಂಭಟ್ಟರೆ, ಇನ್ನಾದರೂ ಏನಾಯಿತು; ರಾಜಪುರೋಹಿತರಿಗೆ ಹೋಗಿ ಗಂಟುಬೀಳಿರಿ! ಏನಾದರೂ ಸಿಕ್ಕೀತು!

ನಮಸ್ಕಾರ! ನಮಸ್ಕಾರ !!

(ಹೋಗುತ್ತಾರೆ)

## ಎರಡನೆಯ ಅಂಕ ಸಮಾಪ್ತವು

# ಮೂರನೆಯ ಅಂಕವು

## ಮೊದಲನೆಯ ಪ್ರವೇಶವು

(ಕಲಿಯು)

**ಕಲಿ:**—ಲೋಕದಲ್ಲೆಲ್ಲ ಮೂರ್ಖತನವು ತುಂಬಿಹೋಗಿದೆ !! ದೇವರ್ಷಿ ಮಹರ್ಷಿಗಳೆಂಬ ನೀಚರು ಪಾಪಪುಣ್ಯಗಳೆಂಬ ಕೀಳುತನದ ಭೇದವನ್ನು ಹುಟ್ಟಿಸಿ ಜನರ ಸುಖಗಳಲ್ಲಿ ಮಣ್ಣು ಕಲಿಸಿಬಿಟ್ಟಿರುವರು. ಅವರು ಹೇಳುವ ದೇನೆಂದರೆ, ಸುರಾಪಾನ ಮಾಡುವದು ಪಾಪ; ತನ್ನಲ್ಲಿ ಆಸಕ್ತಳಾದ ಸ್ತ್ರೀ ಗಮನ ಮಾಡುವದು ಪಾಪ; ಸ್ವೇಚ್ಛೆಯಿಂದ ನಡೆಯುವದು ಪಾಪ! ಸಾರಾಂಶ ಸುಖದಿಂದಿರುವದೇ ಪಾಪ !!! ಮತ್ತೇನೆಂದಿರಿ ! ಮೈಗೆ ಬೂದೀ ಬಡಕೊಳ್ಳುವದೇ ಪುಣ್ಯ, ದಿಗಂಬರನಾಗಿ ತಿರುಗುವದು ಪುಣ್ಯ, ಕಲ್ಲುಮುಳ್ಳು ತಿಂದಿರುವದು ಪುಣ್ಯ, ಉಪವಾಸ ಸತ್ತರಂತೂ ಹೆಚ್ಚಿನ ಪುಣ್ಯ !!! ಏನು ವಿಪರೀತವಿದು !

ಸುರಾಪಾನ ಮಾಡುವದು ಪಾಪವಂತೆ ! ಅದೇ ಸುರೆಗಾಗಿ ದೇವತೆಗಳು ದೈತ್ಯರೊಡನೆ ಪ್ರಚಂಡವಾದ ಕಲಹವನ್ನೆಬ್ಬಿಸಿ, ಕಡೆಗೆ ಆ ಸತ್ವಶಾಲಿಗಳನ್ನು ವಂಚಿಸಿ, ಹದಿನಾಲ್ಕು ರತ್ನಗಳಲ್ಲಿ ಗಣನೆಯನ್ನು ಹೊಂದಿರುವಂಥ ಆ ಅಪ್ರತಿಮವಾದ ಪೇಯವನ್ನು ಅಪಹರಿಸಿದರು. ಅನ್ಯರು ಮಾತ್ರ ಆ ಆನಂದದಾಯಕವಾದ ರಸವನ್ನು ಸ್ವೀಕರಿಸಿದರೆ ಪಾಪವಲ್ಲೆ !? ಅಹಹಾ ಮದಿರೆ! ನಿನ್ನ ನಿರುಪಮವಾದ ಗುಣಗಳನ್ನು ಮುದಿ ಹದ್ದುಗಳಾದ ಋಷಿಗಳು ಅರಿಯದೆ ನಿನ್ನನ್ನು ವ್ಯರ್ಥವಾಗಿ ದೂಷಿಸುತ್ತಾರೆ ಕಂಡಿಯಾ !!

ರಾಗ—ಕಾನಡಾ; ಆದಿತಾಲ.

ಧಾಟಿ:—'ಮಧುವಾ ಭರಲಾದೆ ಮೋರಿ'

ಮದಿರೆ ರುಚಿಸಾರೆ ಸೀರೆ ।
ಹೃದಯಮೋಹಿನಿ ಸಂತೋಷವ ನಮಗೀಯೆ ॥ ಪಲ್ಲ ॥
ಇಂದ್ರಲೋಕವೇ ಸಖಿ, ತಾನದು ಕಾನನ ಕಾಣೆ ॥
ಸಾಂದ್ರ ನೀನು ತೊಲಗೆ ಸುರರೇಂ ಸುರಪಾದಪರೆ ॥

ಸ್ತ್ರೀಪುರುಷರನ್ನು ವಿವಾಹದ ಅನರ್ಥಕರವಾದ ಬಂಧನದಲ್ಲಿ ಕಟ್ಟಿ ಹಾಕಿದ್ದರಿಂದ ಎಲ್ಲ ಕಡೆಯಲ್ಲಿಯೂ ಗೋಳಾಟವೇ ಗೋಳಾಟವಾಗಿ ಹೋಗಿದೆ. ಸ್ತ್ರೀವಿಲಾಸಕ್ಕೆ ನಿರ್ಬಂಧವಿರಬಹುದೆ !?

ರಾಗ—ಕಾವೋದ, ಏಕತಾಲ. (ತೀವ್ರ)

ಧಾಟಿ:—' ಲಾಗಿರೆ ಮೋರಿ ನೈ ಲಗಾನೆ '

ಕಾಮಿನಿಯರು ಪ್ರೇಮದೋರಿ । (ಬಹುಪ್ರೇಮದೋರಿ)
ರಮಿಸೆ ಸಮ್ಮುದದಿ ಸವಿಗಾರನ ಸರಿ ।
ಕುಮತಿಗಳಿರ, ದುರಿತವೆ ರತಿಸುಖವಿದು ॥ ಪಲ್ಲ ॥
ಈ ದೇಹವೇಕೆ ಭೋಗರಹಿತಗೆ !!
ವಧುಗಳೇಕೆ ಭೂಲೋಕದಿ ? ॥ ೧ ॥

ಲಗ್ನವೇ ಅನೇಕವಾದ ದುಷ್ಪರಿಣಾಮಗಳ ಮೂಲವೆಂಬದು ಮೂಢರಾದ ಧರ್ಮಪ್ರವರ್ತಕರಿಗೆ ಹೇಗೆ ತಿಳಿಯಲೊಲ್ಲದೊ ಕಾಣೆ! ಪ್ರೇಮವಿಲಾಸಕ್ಕೆ ಹಾದರವೆಂಬ ಕೆಟ್ಟ ಹೆಸರಿಟ್ಟು ಅವರು ಪುರುಷರನ್ನು ವೃಥಾಭಿಮಾನದಲ್ಲಿ ನೂಕಿದ್ದರಿಂದ ಮನಸ್ತಾಪ, ದ್ವೇಷ, ಕೊಲೆ ಮುಂತಾದ ಅನರ್ಥಗಳು ಉದ್ಭವಿಸುವದಿಲ್ಲವೆ ? ಲಗ್ನದ ಅನುದಾರವಾದ ನಿಯಮವನ್ನು ಪ್ರೇಮಪರವಶಳಾದ ಕಾಮಿನಿಯೋರ್ವಳು ಯತ್ಕಿಂಚಿತ್ ಮುರಿದಿದ್ದರ ನೆವಕ್ಕಾಗಿ ದೊಡದೊಡ್ಡ ಸಾಮ್ರಾಜ್ಯಗಳು ಬುಡಮೇಲಾಗಿ ಹೋದವು !!

ಇದು ಹಾಗಿರಲಿ. ಧರ್ಮಕ್ಕೆ ಅಧಿದೇವತೆಗಳಾಗಿರುವ ಇಂದ್ರಚಂದ್ರರ ಆಚರಣಗಳನ್ನೇ ನೋಡಿರಿ !

ರಾಗ—ಮಿಯಾಮಲ್ಹಾರ

ಧಾಟಿ:—' ಬಿಜಲೀ ಚಮಕತ ಬರಸೇ '

ಇವರೇಂ ಗುಣಯುತರಹುದೆ ಛೀ ಬಿಡಿರಿ ನೀಚರಿವರಿಗೆ ।
ಹವನಗಳನು ನೀಡಿ ಕೆಡುವವರೇಂ ಛೀ ॥ ಪಲ್ಲ ॥
ಗುರುಸತಿಯೊಳ್ ರಮಿಸಿದನು ಶಶಾಂಕಂ ।
ಸುರನಾಥನು ತಾಂ ಗೌತಮಿಯೊಳ್ ।
ದುರಾತ್ಮರ್ಗೆ ಗಡ ಮಹಾತ್ಮರೆ, ಪರಿಭಾವಿಸಲು ॥ ೧ ॥

ಹೀಗಿದ್ದರೂ ನಾವು ಎಲ್ಲ ಧರ್ಮಕೃತ್ಯಗಳನ್ನು ಈ ಇಂದ್ರಚಂದ್ರರನ್ನೇ ಹಿಡುಕೊಂಡು ಮಾಡಬೇಕಂತೆ !! ಈ ನೀಚರಿಂದ ಅಭಿಮರ್ಶಿತರಾದ ಅಹಲ್ಯಾ ತಾರೆಯರು ಪತಿವ್ರತೆಯರಲ್ಲಿ ಶಿರೋಮಣಿಗಳು !!! ಅಹಹಾ ಪಾತಿವ್ರತ್ಯವೆ !!!

ಕುಂಬಳಸೊಟ್ಟೆಯ ಋಷಿಗಳು ಶಾಸ್ತ್ರಗಳನ್ನು ಬರೆದ ಮಾತ್ರಕ್ಕೆ ಯಾರು ಕೇಳುತ್ತಿದ್ದರು ? ಆ ವಂಚಕರ ಮೋಸಕ್ಕೆ ಒಳಗಾಗಿ ಮಂದಮತಿಗಳಾದ ರಾಜರು ತಾವು ಧರ್ಮರಕ್ಷಕರೆಂಬ ಹೇವಕ್ಕೆ ಬಿದ್ದು ಧರ್ಮದ ಅವಿವೇಕವಾದ ಶೃಂಖಲೆಯನ್ನು ಜನರ ಕೈಕಾಲುಗಳಲ್ಲಿ ತೊಡಕಿಸುತ್ತಾರಲ್ಲ !! ಆಗಲಿ ! ಧರ್ಮದ ಮಾಯಾಜಾಲವನ್ನು ನುಚ್ಚುನುಚ್ಚಾಗಿ ಹರಿದೊಗೆದು ಜನರು ಸುಖೋಪಭೋಗಗಳಲ್ಲಿ ಅವ್ಯಾಹತವಾಗಿ ಕಾಲಕಳೆಯುವಂತೆ ಮಾಡುವದಕ್ಕಾಗಿಯೇ ಈ (ಎದೆಗೆ ಕೈಮುಟ್ಟಿಕೊಂಡು) ಚಂಡವಿಕ್ರಮನ ಅವತಾರವು. ಈ ಕಾರ್ಯವು ಸಿದ್ಧಿಗೆ ಮುಟ್ಟಬೇಕಾದರೆ ಏನು ಮಾಡತಕ್ಕದ್ದು ? (ತುಸು ಅಡ್ಡಾಡಿ) ಹಾಂ ! ಕ್ಷತ್ರಿಯಾಧಮರಾದ ರಾಜರನ್ನೇ ಪಾತಾಳಕ್ಕೆ ಮೆಟ್ಟಿದರೆ, ದೇಹವು ನಷ್ಟವಾದ ಬಳಿಕ ನೆಳಲು ತನ್ನಿಂದ ತಾನೇ ನಷ್ಟವಾಗುವಂತೆ, ಧರ್ಮವು ತನ್ನಿಂದ ತಾನೇ ಇಲ್ಲದಂತಾಗುವದು. ಇನ್ನು ಮೊದಲನೆಯ ತುತ್ತಿಗೆ ಯಾವ ರಾಜನನ್ನು ನುಂಗಬೇಕು ? ಅಯೋಧ್ಯಾ ........ಋತುಪರ್ಣನಲ್ಲಿ ಅರ್ಥವಿಲ್ಲ ! ಕಾನ್ಯಕುಬ್ಜ........ಅಷ್ಟರೊಳಗೆಯೇ ! ಚೇದಿ........ಸಣ್ಣ ರಾಜ್ಯ ! ನಿಷಧ........ಅಹಾ !! ಒಳ್ಳೇ ನೆನಪಾಯಿತು ! ನಲದಮಯಂತಿಯರನ್ನು ಕಾಡಬೇಕೆಂದು ನಿಶ್ಚಯಮಾಡಿಕೊಂಡವನು ಸೋಮಾರಿತನದಲ್ಲಿ ಮರೆತುಬಿಟ್ಟೆನು. ಇನ್ನು ಮಾತ್ರ ಸರ್ವಥಾ ವಿಲಂಬ ಮಾಡತಕ್ಕದ್ದಲ್ಲ.

ಒಳ್ಳೇದು ! ನಲನ ದೇಶದಲ್ಲಿ ನನ್ನ ಪ್ರವೇಶವಾಗುವದು ಹೇಗೆ ? ಅವನಂಥ ಪ್ರಜಾಪಾಲನದಕ್ಷನಾದ ಚಕ್ರವರ್ತಿಯ ಆಡಳತೆಯಲ್ಲಿ ಪ್ರಜರೆಲ್ಲರೂ ವಿಚಾರಶೀಲರೂ ಧರ್ಮಪರಾಯಣರೂ ಆಗಿರುವದರಿಂದ ನನ್ನ ಬೇಳೆ ಬೇಯುವದು ಸುಲಭವಾದ ಮಾತಲ್ಲ. (ಅಡ್ಡಾಡಿ ವಿಚಾರಿಸಿ) ನಲನಿಗೆ ಪುಷ್ಕರನೆಂಬ ತಮ್ಮನಿರುವನು; ಹೇಳಿ ಮಾಡಿಸಿದ ಮೂರ್ಖನೇ ಅವನು. ಅವನ ಸಹಾಯದಿಂದ ನಿಷಧ ದೇಶದಲ್ಲಿ ಬೇರೂರಲಿಕ್ಕೆ ಬರುವಂತೆ ಇದೆ. ನನ್ನಂಥ ನಿಪುಣನಿಗೆ ಎಳೆ ಸಿಕ್ಕರೆ ಸಾಕು, ಸೀಳು ನುಂಗುವದೇನು ತಡ !!

ನಾನಿನ್ನು ದ್ಯೂತನಾಥನೆಂಬ ಹೆಸರಿಟ್ಟುಕೊಂಡು ಪುಷ್ಕರನ ಸ್ನೇಹವನ್ನು ಸಂಪಾದಿಸುವೆನು. ಆಮೇಲೆ ದ್ಯೂತ ಮದ್ಯಪಾನಾದಿ ವ್ಯಸನಗಳನ್ನು ಮೆಲ್ಲಮೆಲ್ಲನೆ ಜನರಿಗೆ ತಗಲಿಸಿ ರಾಜ್ಯದಲ್ಲಿ ಅನೇಕವಾದ ಅನರ್ಥಗಳನ್ನು ಉಂಟುಮಾಡಿದ ಬಳಿಕ ನಲನ ಪಾರಿಪತ್ಯದ ಕೆಲಸವನ್ನು ಹೇಗೆ ಪ್ರಾರಂಭಿಸುವೆನೆಂಬದನ್ನು ಲೋಕವು ಕಂಡು ಆಶ್ಚರ್ಯದಿಂದ ಬೊಟ್ಟು ಕಚ್ಚಿಕೊಳ್ಳುವದು.

ಧಾಟಿ:—'ಕಂಠ ಚರಚರ ಚಿರುನಿ ಮಾರಿನ'

ಇನ್ನು ನಲನನು ಮಣ್ಣುಗಾಣಿಸೆ ನಾನಿದೊಂದೇ ಪರುಷದಿ ॥
ಮುನ್ನ ಧರ್ಮದ ಬನ್ನ ಬಾರದು; ಲೋಕ ನಗುವದು ಹರುಷದಿ ॥
ಪ್ರಾಯಮದದಲಿ ತರುಣಿ ತರುಣರು ಪ್ರೇಮ ಮಿಗೆ ಮರದಾಡಲಿ ॥
ಪೇಯಗಳ ಸುಖ ತಾವು ಸೇವಿಸಿ ಕಾಮದೇವನ ಪಾಡಲಿ ॥ ೨ ॥

(ಹೋಗುತ್ತಾನೆ)

---

## ಎರಡನೆಯ ಪ್ರವೇಶವು

(ಪುಷ್ಕರನೂ ದ್ಯೂತನಾಥನು)

ಪುಷ್ಕರ:— (ಓರ್ವನೆ) ದ್ಯೂತನಾಥನೆಂದರೆ ಎಂಥ ವಿಲಕ್ಷಣವಾದ ವ್ಯಕ್ತಿಯದು !! ಛೇ ! ಅವನಂಥ ಬುದ್ಧಿವಂತನನ್ನು ನಾನು ಕಾಣಲೇ ಇಲ್ಲ. ಅವನ ಅನುವಾದವನ್ನು ಕೇಳಿ ನನ್ನ ಸ್ಥಿತಿಯ ಅರಿಕೆಯು ನನಗೆ ಚನ್ನಾಗಿ ಆಯಿತು.

ನಲನು ವೀರಸೇನ ಮಹಾರಾಜರ ಮಗನಾದರೆ ನಾನೂ ಅವರ ಮಗನೇ? ನಲನು ನನಗಿಂತಲೂ ಮೊದಲು ಹುಟ್ಟಿದನೆಂದು ಅವನು ಮಹಾರಾಜನಾದ ನಷ್ಟೆ ? ಅವನು ಅಧಿಕಾರಸಂಪನ್ನನಾದ್ದರಿಂದ ಮೂಢರು ಅವನನ್ನು ಪ್ರತಾಪಶಾಲಿಯೆಂದೂ ಪುಣ್ಯಶ್ಲೋಕನೆಂದೂ ಅಳತೆಗೆಟ್ಟು ಹೊಗಳುತ್ತಾರೆ. ಆದರೆ ನನ್ನವಸ್ಥೆ ನೋಡಿರಿ !! ಕುಗ್ರಾಮದ ಶಾನುಭೋಗನಿಗೆ ಕೂಡ ಅಲ್ಪಸ್ವಲ್ಪ ಅಧಿಕಾರವಿರುತ್ತದೆ; ರಾಜಪುತ್ರನಾದ ನಾನು ಶಾನುಭೋಗನಿಗೂ ಕಡೆಮೆಯಾಗಿರಬಹುದೆ ? !!

ನಲನು ತೋರಿಕೆಗಾಗಿ ನನ್ನ ಮೇಲೆ ಅತಿಶಯವಾದ ಮಮತೆ ಮಾಡಿದಂತೆ ಮಾಡುತ್ತಾನೆ. ರಾಜಸಭೆಯಲ್ಲಿ ನನ್ನನ್ನು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿಕೊಳ್ಳುತ್ತಾನೆ; ಮನೆಯಲ್ಲಿ ನಾನು ಬೇಡಿದ್ದು ಹಿಡಕೊಂಡು ನಿಂತಿರುತ್ತಾನೆ; ತನಗಾಗುವ ಮರ್ಯಾದೆಗಳನ್ನೆಲ್ಲ ನನಗೂ ಸಲ್ಲಿಸುತ್ತಾನೆ. ಮತಿಹೀನನಾದ ನಾನು ಇದೆಲ್ಲ ನಿಜವಾದ ಪ್ರೇಮವೆಂದು ತಿಳಿದಿದ್ದೆನು. ದ್ಯೂತನಾಥನು ತಿಳಿಸಿಕೊಟ್ಟ ಬಳಿಕ ನಲನ ಕಪಟವೆಲ್ಲ ಹೊರಬಿದ್ದಿತು ! ರಾಜ್ಯಕಾರಭಾರದಲ್ಲಿ ನನ್ನ ಕೈಸೇರಿತೆಂದರೆ ನನ್ನ ವರ್ಚಸ್ಸವು ಬೆಳೆದು ತನ್ನ ಸಿಂಹಾಸನಕ್ಕೆ ಹಾನಿ ತಟ್ಟುವದೆಂಬ ಭೀತಿಯಿಂದ ನಲನು ಮೇಲೆಮೇಲೆ ಪ್ರೀತಿಯನ್ನು ತೋರಿಸಿ ನನ್ನನ್ನು ಪಂಜರದೊಳಗಿನ ಹಕ್ಕಿಯಂತೆ ಕಟ್ಟನಲ್ಲಿ ಇಟ್ಟುಬಿಟ್ಟದ್ದಾನಲ್ಲೆ ? ವಿಲಾಸಪ್ರಿಯನಾದ ನನಗಿದೆಲ್ಲ ಸಮಾಚೀನವಾಗಿಯೇ ತೋರಿತು ! ಇನ್ನು ಮೇಲೆ ಮಾತ್ರ ಇಂಥ ಮೋಸಕ್ಕೆ ಸರ್ವಥಾ ಒಳಗಾಗ ಬಾರದು !!

(ದ್ಯೂತನಾಥನು ಪ್ರವೇಶಿಸುತ್ತಾನೆ)

**ದ್ಯೂತನಾಥ:**—(ಪ್ರಣಾಮ ಮಾಡಿ) ಮಿತ್ರಾ, ಪುಷ್ಕರರಾಜಾ, ಏನೋ ಗಹನವಾದ ವಿಚಾರದಲ್ಲಿ ಮುಳುಗಿರುವಂತೆ ಕಾಣುವಿಯಲ್ಲ?

**ಪುಷ್ಕರ:**—ಬಾ. ದ್ಯೂತನಾಥಾ, ನಲನ ಕಪಟೋಪಾಯಗಳನ್ನು ನೆನೆ-ನೆನೆದ ಹಾಗೆ ಮನಸ್ಸಿಗೆ ಹೆಚ್ಚೆಚ್ಚು ಸಂತಾಪವಾಗುತ್ತದೆ. ಅಣ್ಣನು ತಂದೆಯ ಸಮನೆಂದು ನಾನು ತಿಳಕೊಂಡು ವರ್ತಿಸುತ್ತಿರಲು ಅವನು ಹೀಗೆ ಮೋಸ ಮಾಡಬಹುದೆ?!!

**ದ್ಯೂತ:**—ಮಿತ್ರಾ, ನಲನ ಪ್ರೇಮದ ಆವಿರ್ಭಾವಕ್ಕೆ ನೀನೊಬ್ಬನೇಕೆ, ಲೋಕವೆಲ್ಲ ಮೋಸಹೊಂದಿರುವದು.

**ಪುಷ್ಕರ:**—ದ್ಯೂತನಾಥ, ಉಪಾಯವಿಲ್ಲದ ಮಾತಿಗೆ ಇನ್ನೇನು ಮಾಡತಕ್ಕದ್ದಿದೆ?

**ದ್ಯೂತ:**—ಅದಕ್ಕೆ ಹೆಂಗಸರ ಹಾಗೆ ಅತ್ತರೇನಾಗುವದು!? ಯುಕ್ತಿ ಪ್ರಯುಕ್ತಿಗಳಿಂದ ಇಷ್ಟಾರ್ಥವನ್ನು ಸಾಧಿಸಿಕೊಳ್ಳುವವನೇ ಪುರುಷನು.

**ಪುಷ್ಕರ:**—ನಾನೇನು ಮಾಡಲಿ ಮಿತ್ರಾ? ಸಕಲ ಜನರೂ ನಲನ ಪಕ್ಷಪಾತಿಗಳು. ಅವನಂಥ ಸಾರ್ವಭೌಮನು ಹಿಂದೆ ಹುಟ್ಟಿಲ್ಲ, ಮುಂದೆ ಹುಟ್ಟಲಿಕ್ಕಿಲ್ಲವೆಂದು ನೆನೆದು ಪ್ರಜರು ಅವನಲ್ಲಿ ನಿಸ್ಸೀಮವಾದ ಭಕ್ತಿಯುಳ್ಳವರಾಗಿದ್ದಾರೆ.

**ದ್ಯೂತ:**—ಪುಷ್ಕರರಾಜ, ನೀನೀಗ ಬಹಳೇ ದೀನನಾಗಿರುವಿ. ಇಕೋ! ಈ ಮನಸ್ತಾಪಹಾರಿಣಿಯಾದ ಮದಿರಾದೇವಿಯ ಸ್ವಾದವನ್ನು ತುಸು ಸೇವಿಸಿ ನೋಡು. ಬಳಿಕ ವಿಚಾರತರಂಗಗಳು ಹೇಗೆ ಸೂಸಿ ಬರುವವೋ ತಿಳಿಯುವದು.

**ಪುಷ್ಕರ:**—ತಾ. ಮಿತ್ರಾ, ಮದಿರೆಯ ಸೇವನದಿಂದ ಈಗೀಗ ನನಗೆ ಒಳ್ಳೇ ಸ್ಫೂರ್ತಿ ಬರುತ್ತದೆ. (ಕುಡಿಯುತ್ತಾನೆ).

**ದ್ಯೂತ:**—ಪುಷ್ಕರರಾಜಾ, ಸದ್ಯಕ್ಕೆ ನೀನು ನಲನೊಡನೆ ದುಸುಮುಸು ಮಾಡುತ್ತಿರುವದನ್ನು ಬಿಟ್ಟುಬಿಡು. ಅವನೊಡನೆ ವಿನೀತನಂತೆ ವರ್ತಿಸಿ ಸಲಿಗೆಯಿಂದ ಅವನ ಮುಂದೆ ದ್ಯೂತದ ಪ್ರಸ್ತಾಪವನ್ನು ತೆಗೆ.

**ಪುಷ್ಕರ:**—ಏನು ಹೇಳಿದಿ ದ್ಯೂತನಾಥ? ನಲರಾಜನೆಂದೂ ಜೂಜಾಡಿದವನಲ್ಲ. ನನ್ನ ಪಿಪಾಸುವಾಗಿ ಅವನ ಮನಸ್ಸು ಹೇಗೇ ಇರಲಿ, ನಲನ ಆಚರಣವು ನಿಶ್ಚಯವಾಗಿ ಅತಿ ವಿಶುದ್ಧವಾದದ್ದು.

**ದ್ಯೂತ**:—( ತನ್ನಷ್ಟಕ್ಕೆ) ಸಾಧು ನಲರಾಜಾ, ಸಾಧು !....

ಧಾಟಿ:—' ತೂರೆ ಮೋಮುದಸಾ ದರಬಾರ '

ನೀನೆ ನನ್ನೊಳು ಕಾದಲು ಕೇಳು ಸಮಾನನಾದ ವೀರಂ ॥ ಪಲ್ಲ ॥
ಸೋಲು, ಮೇಲು, ರಣದೊಳ್ ತಾನೆ ದೈವಲೀಲೆ ಕಾಣ್ಕೈ ॥
ತ್ರಿಲೋಕಂಗಳ ಜ್ಯೋತಿಯು ನಲ ನೃಪ ನೀನ್ಕೈ ॥ ೧ ॥

(ಪ್ರಕಾಶವಾಗಿ) ಪುಷ್ಕರರಾಜಾ ನೀನು ಹೇಳುವ ಮಾತು ನನಗಾದರೂ ತಿಳಿದಿದೆ. ಆದರೂ ಹೇಳುತ್ತೇನೆ ಕೇಳು. ಈಗ ಈ ರಾಜ್ಯದಲ್ಲೆಲ್ಲ ಧನಧಾನ್ಯಗಳ ಸಮೃದ್ಧಿಯಾಗಿರುವದಲ್ಲದೆ ಎಲ್ಲ ಕಡೆಯಲ್ಲಿಯೂ ಶಾಂತಿಸಮಾಧಾನಗಳು ನೆಲೆಗೊಂಡಿರುತ್ತವೆ. ಆದ್ದರಿಂದ ನಲರಾಜನು ನಿಶ್ಚಿಂತನಾಗಿ ಸುಖೋಪಭೋಗಗಳನ್ನು ಸೇವಿಸುತ್ತ ಸತಿಸುತರೊಡನೆ ಆನಂದಸಮುದ್ರದಲ್ಲಿ ತೇಲಾಡುತ್ತಾನೆ. ಅವನಿಗೀಗ ರಾಣೀವಾಸ, ಆಹಾರವಿಹಾರಗಳ ಹೊರತಾಗಿ ಬೇರೆ ಕೆಲಸವೇ ಇಲ್ಲ. ಇಂಥವರಿಗೆ ದ್ಯೂತದ ರುಚಿ ಬೇಗ ತಕ್ಕೊಳ್ಳುವದು.

**ಪುಷ್ಕರ**:—ದ್ಯೂತನಾಥ, ಒಳ್ಳೇ ಉಪಪತ್ತಿಪೂರ್ವಕವಾಗಿ ಹೇಳಿದಿ. ನೀನು ಹೇಳಿದಂತೆ ಆಚರಿಸುವೆನು.

**ದ್ಯೂತ**:—ಕೇಳು ಪುಷ್ಕರರಾಜಾ ! ನಲರಾಜನಿಗೆ ದ್ಯೂತದ ರುಚಿ ತಕ್ಕೊಂಡಿತೆಂದರೆ ಅವನನ್ನು ಸಂಪೂರ್ಣವಾಗಿ ಅದರಲ್ಲಿಯೇ ಮುಳುಗಿಸಿಬಿಡುವೆನು. ಸಹವಾಸದಿಂದ ಬರಬರುತ್ತ ಅವನು ನಮ್ಮ ಸ್ನೇಹಿತನಾಗುವನು. ಬಳಿಕ ನಾವು ಮೆಲ್ಲಮೆಲ್ಲಗೆ ರಾಜ್ಯಕಾರಭಾರದಲ್ಲಿ ಕೈಹಾಕಿ ಮುಂಚಿನ ವ್ಯವಸ್ಥೆಯನ್ನೆಲ್ಲ ಕೆಡಿಸಿ ಹಾಳುಮಾಡಿದೆವೆಂದರೆ ನಮ್ಮ ಬಯಕೆಗಳೆಲ್ಲ ಸುಸಾಧ್ಯವಾಗುವವು. ಆಮೇಲೆ ನಿನ್ನ ದೈವವಿದ್ದರೆ ನೀನೇ ಚಕ್ರವರ್ತಿಯು !!

**ಪುಷ್ಕರ**:—ಮಿತ್ರಾ, ನಾನಂತೂ ನಿನ್ನ ಶಿಷ್ಯನಾಗಿರುವೆನು. ನಿನಗೆ ತೋಚಿದಂತೆ ಮಾಡು !

**ದ್ಯೂತ**:—ಚಿಂತೇಬಿಡು !

॥ ಪದ ॥

" ಇನ್ನು ನಲನನು ಮಣ್ಣುಗಾಣಿಪೆ " ಇತ್ಯಾದಿ ಪದವನ್ನು ಮತ್ತೆ ಹಾಡುತ್ತಾನೆ.

( ತೆರೆ )

## ಮೂರನೆಯ ಪ್ರವೇಶವು

### (ನಿಷಧ ದೇಶದ ಮಂತ್ರಿಗಳ ಸಭೆ)

**ಅಮಾತ್ಯ:**—ಮಹಾಶಯರೆ, ರಾಜರು ಪುಷ್ಕರರಾಜರ ಮೋಸಕ್ಕೊಳಗಾಗಿ ದ್ಯೂತದಲ್ಲಿ ಬಹಳೇ ಆಸಕ್ತರಾಗಿರುತ್ತಾರೆ. ಈ ಖೇದಜನಕವಾದ ಸಂಗತಿಯು ನಿಮ್ಮೆಲ್ಲರಿಗೂ ವಿದಿತವಾದದ್ದೇ. ಅರಮನೆಯ ಸಂಪತ್ತೆಲ್ಲ ದ್ಯೂತದಲ್ಲಿ ಹಾಳಾಗಿಹೋಯಿತು. ಭಾಂಡಾರದಲ್ಲಿಯ ಹಣವನ್ನು ಕೂಡ ರಾಜರು ಒಂದಿಲ್ಲ ಒಂದು ನೆವದಿಂದ ಸೆಳಕೊಂಡು ಸೂರೆಮಾಡಿಬಿಟ್ಟರು. ರಾಜರ ದ್ಯೂತಾಸಕ್ತಿಯು ಹೀಗೆಯೇ ಅವ್ಯಾಹತವಾಗಿ ನಡೆದರೆ ನಮ್ಮ ರಾಜ್ಯಕ್ಕೆ ಹಾನಿ ತಟ್ಟದೆ ಇರದು. ರಾಜಕಾರಣದಲ್ಲಂತೂ ಮಹಾರಾಜರು ಮನಸ್ಸು ಹಾಕುವದನ್ನು ಬಿಟ್ಟೇ ಬಿಟ್ಟಿರುವರು. ಮುಂದೇನು ಆಲೋಚನೆ ?

**ಸಚಿವ:**—ಅಮಾತ್ಯರೆ, ರಾಜರು ದ್ಯೂತ್ಯಕಾರರ ಸ್ನೇಹಿತರಾಗಿ ನಡೆಯುತ್ತಿರುವದರಿಂದ ರಾಜ್ಯದಲ್ಲಿ ಇನ್ನೂ ಅನೇಕವಾದ ದುಷ್ಪರಿಣಾಮುಗಳು ಉಂಟಾಗಿವೆ. ಸಂಪತ್‌ಪುರದ ಪಾಳ್ಯಗಾರರು ತೀರಿಕೊಂಡ ಬಳಿಕ ಅವರ ತಮ್ಮನ ದಾಯ ಸಂಬಂಧವನ್ನು ಲೆಕ್ಕಿಸದೆ ರಾಜರು ಆ ಆಸ್ತಿಯನ್ನು ದುರೋದರನೆಂಬ ದ್ಯೂತಕಾರನಿಗೆ ಕೊಟ್ಟರು. ಇದು ಅನ್ಯಾಯವೆಂದು ನ್ಯಾಯಾಧೀಶರು ಹೇಳಿದರೆ 'ನಿಮಗೆ ಬೇಕಾದರೆ ಕೆಲಸ ಮಾಡಬಹುದು, ಇಲ್ಲದಿದ್ದರೆ ಯಥೇಷ್ಟವಾಗಿ ಬಿಟ್ಟುಕೊಡಬಹುದು' ಎಂದು ರಾಜರು ನ್ಯಾಯಾಧೀಶರಿಗೆ ಹೇಳಿದರು.

**ಸುಮಂತ:**—ಪ್ರತ್ಯಕ್ಷ ನನ್ನ ಅವಸ್ಥೆಯನ್ನೇ ಕೇಳಿರಿ! ನಿನ್ನೆ ಸಾಯಂಕಾಲಕ್ಕೆ ರಾಜರು ನನ್ನನ್ನು ಕರೆಸಿ "ನಿನ್ನನ್ನು ಅಧಿಕಾರದಿಂದ ದೂರಮಾಡಿದ್ದೇವೆ" ಎಂದು ಹೇಳಿದರು. ನಾನು ಮಾಡಿದ ತಪ್ಪಾದರೂ ಯಾವದೋ ರಾಜರಿಗೇ ಗೊತ್ತು!

(ಏನು ? ಏನು !!? ಎಂದು ಎಲ್ಲರೂ ಆಶ್ಚರ್ಯದಿಂದ ಕೇಳುತ್ತಾರೆ)

**ಸುಮಂತ:**—(ವಿಷಾದದಿಂದ ನಕ್ಕು) ನಾನು ಹೇಳುವದು ನಿಜವು !

**ಅಮಾತ್ಯ:**—ಏನನರ್ಥವಿದು !!!

**ಸೇನಾಪತಿ:**—ಒಬ್ಬ ದ್ಯೂತಕಾರನು ನಿನ್ನೆ ಸೈನ್ಯದ ಪಥಕಾಧಿಪತಿಯಾದನು. ನಾಳಿಗೆ ಯಾವನು ಅಧಿಕಾರದಿಂದ ದೂರಾಗುವನೋ ತಿಳಿಯದು!

**ಅಮಾತ್ಯ:**—ಮಹನೀಯರೆ, ರಾಜ್ಯದ ಆಧಾರಸ್ತಂಭವೇ ವೈಮೇಲೆ ಕಡುಕೊಂಡು ಬೀಳುವಾಗ ಮಾಡುವದೇನು ?

**ಸೇನಾಪತಿ:**—ಅಮಾತ್ಯರೇ, ಏನಾದರೊಂದು ಉಪಾಯವನ್ನು ನೀವೇ ಯೋಚಿಸತಕ್ಕದು. ನಾವೇನು ಹೇಳಬಲ್ಲೆವು ?

**ಅಮಾತ್ಯ:**—ನಾವೆಲ್ಲರೂ ಕೂಡಿ ಒಂದಾವರ್ತಿ ಮಹಾರಾಜರ ಸನ್ನಿಧಾನಕ್ಕೆ ಹೋಗಿ ಅವರ ಕೃತಿಯಿಂದಾಗುವ ಅನರ್ಥಗಳನ್ನು ಅವರಿಗೆ ತಿಳಿಸಿ ಹೇಳೋಣ; ಬಳಿಕ ಮುಂದಿನ ಆಲೋಚನೆ !

**ಸಚಿವ:**—ಅಮಾತ್ಯರೊಬ್ಬರೇ ಹೋಗಿ ಹೇಳಿದರಾಗದೇನು ?

**ಅಮಾತ್ಯ:**—ರಾಜರಿಗೆ ನಾನು ಅನೇಕಾವರ್ತಿ ಏಕಾಂತದಲ್ಲಿ ಬುದ್ಧಿವಾದವನ್ನು ಹೇಳಿ ನೋಡಿದೆನು. ಆದರೇನು !!?

**ಸೇನಾಪತಿ:**—ನಾವೆಲ್ಲರೂ ಕೂಡಿ ಹೇಳೋಣ ! ಏನು ಭಯ ?

**ಸಚಿವ:**—ಸರಿ ! ಸರಿ ! ಹಾಗೆ ಮಾಡೋಣ.

**ಅಮಾತ್ಯ:**—ನಡೆಯಿರಿ ಹಾಗಾದರೆ ಇದೇ ಸಾಯಂಕಾಲಕ್ಕೇ ಮಹಾರಾಜರ ಸನ್ನಿಧಾನಕ್ಕೆ ಹೋಗೋಣ.

(ಎಲ್ಲರೂ ಹೋಗುತ್ತಾರೆ)

---

## ನಾಲ್ಕನೆಯ ಪ್ರವೇಶವು

(ದ್ಯೂತಗೃಹದಲ್ಲಿ, ದ್ಯೂತನಾಥ, ಕುಮುದ, ದುರೋದರ, ದುಂಡಾಚಾರಿ, ರಾಜಾ, ಪುಷ್ಕರ)

**ದ್ಯೂತನಾಥ:**—(ಓರ್ವನೆ) ಈ ಕಲಿರಾಜನಿಗೆ ಸಾಧ್ಯವಾಗದ ಮಾತು ಯಾವದು ? ನಲನು ಸಂಪೂರ್ಣವಾಗಿ ದ್ಯೂತದಲ್ಲಿ ನಿಮಗ್ನನಾಗಿಬಿಟ್ಟಿರುವನು. ಮುಖ್ಯವಾದ ಕೆಲಸವಂತೂ ಆಯಿತು !! ನನ್ನ ಅನುಯಾಯಿಗಳಾದ ದ್ಯೂತಕಾರರು ಮೆಲ್ಲಮೆಲ್ಲನೆ ರಾಜ್ಯದಲ್ಲಿ ದೊಡ್ಡದೊಡ್ಡ ಅಧಿಕಾರಗಳನ್ನು ಪಡಕೊಳ್ಳಲಾರಂಭಿಸಿದರು. ನಾಲ್ಕೇ ತಿಂಗಳದಲ್ಲಿ ನಾನು ನಾಲ್ಕು ಸಾವಿರ ಜನಕ್ಕೆ ಸುರೆಯ ವ್ಯಸನವನ್ನು ತಗಲಿಸಿದೆನು. ಪುಷ್ಕರನ ದ್ವಾರಾ ಧರ್ಮಾಭಿಮಾನಿಗಳನ್ನು ಪೀಡಿಸಿ ಉತ್ಶೃಂಖಲರನ್ನು ಏರಿಸಿ ಕುಳ್ಳಿರಿಸಿರುವೆನು. "ರಾಜಾ ಕಾಲಸ್ಯ ಕಾರಣಂ" ಎಂಬ ನ್ಯಾಯದಿಂದ ನಾನು ಉಂಟುಮಾಡಿದ ಪರಿಸ್ಥಿತಿಗೆ ಪ್ರಜರು ನಲನನ್ನೇ ನಿಂದಿಸುವರು. ಸೂಳೆಯು ಪಾಪ ಸನ್ಯಾಸಿಗೆ !!! (ಅಡ್ಡಾಡಿ ಕಿವಿಗೊಟ್ಟು ಕೇಳಿ) ದ್ಯೂತದ ಮೇಳದವರು ಬಂದಂತೆ ಕಾಣುತ್ತದೆ. (ಸುಮ್ಮನೆ ಅಡ್ಡಾಡುತ್ತಾನೆ)

(ದ್ಯೂತರು ಪ್ರವೇಶಿಸುತ್ತಾರೆ)

**ದುರೋದರ:**—ನಮಸ್ಕಾರ ದ್ಯೂತನಾಥರೆ, ದೊಡ್ಡ ವಿಚಾರದಲ್ಲಿ ಮುಳುಗಿರುವಂತೆ ಕಾಣುತ್ತೀರಲ್ಲ !!

**ದ್ಯೂತ:**—(ನಕ್ಕು) ಮಗನೆ, ನಾನು ಯುಕ್ತಿಗಳನ್ನು ಕಲ್ಪಿಸದಿದ್ದರೆ ನೀನು ಸಂಪತ್‌ಪುರದ ಪಾಳ್ಯಗಾರನಾಗುತ್ತಿದ್ದಿಯಾ ? ಯಾಕೆ ಕುಮುದಾ, ಅಹುದೋ ಅಲ್ಲವೋ ?

**ಕುಮುದ:**—ದ್ಯೂತನಾಥರೆ, ದುರೋದರನು ತಮ್ಮ ಅನುಗ್ರಹದಿಂದ ಸಂಪತ್‌ಪುರದ ಪಾಳ್ಯಗಾರನಾದನು. ನನ್ನ ಬಗ್ಗೆ ಏನೂ ವ್ಯವಸ್ಥೆಯಾಗಲಿಲ್ಲ?

**ದ್ಯೂತ:**—ಬೊಡ್ಡೀಮಗನೆ, ಲಕ್ಷಾವಧಿ ನಿಷ್ಕಗಳನ್ನು ದ್ಯೂತದಲ್ಲಿ ಗೆದ್ದುಕೊಂಡಿರುವಿ; ಸಾಲದೇನು ? ಆದರೂ ಯೋಚಿಸಬೇಡ. ನಿನಗೂ ಒಂದು ಅಧಿಕಾರವನ್ನು ಬೇಗನೆ ಕೊಡಿಸುವೆನು. ಪುಷ್ಕರನೆಲ್ಲಿ ?

**ಕುಮುದ**:—ಅಲ್ಲಿ ನೋಡಿರಿ! ದುಂಡಾಚಾರಿಯು ನಲ ಪುಷ್ಕರರನ್ನು ಮುಂದೆ ಹಾಕಿಕೊಂಡು ಬರುತ್ತಿರುವನು.

(ರಾಜಾ, ಪುಷ್ಕರ, ದುಂಡಾಚಾರಿ ಪ್ರವೇಶಿಸುತ್ತಾರೆ)

**ದುರೋದರ**:—(ರಾಜನನ್ನು ಕುರಿತು) ಏನು ಮಹಾರಾಜರೆ, ಎಷ್ಟು ತಡಮಾಡಬೇಕದು? ಹೊತ್ತು ಹೋಗುತ್ತದೋ ಬರುತ್ತದೊ?

**ರಾಜಾ**:—(ನಸುನಕ್ಕು) ಗೃಹಕೃತ್ಯಗಳಿರುತ್ತವಲ್ಲ!! ಬಹಳ ತಡ ವಾಯಿತೇನು ?

**ದುರೋದರ**:—ಕೇಳುತ್ತೀರೇನು ಮತ್ತೆ? ಗೃಹಕೃತ್ಯಗಳೆಲ್ಲಿ ಹೋಗಿವೆ? ಅವು ಬೆನ್ನಿಗೇ ಹತ್ತಿವೆ.

**ದುಂಡಾ**:—"ವ್ಯರ್ಥ ವ್ಯಾಳ್ಯಾ ಕಳೆಯಬೇಡಿರೊ" ಎಂದು ಹರಿದಾಸ ಶಿರೋಮಣಿಗಳು ಕೂಗಿಕೊಳ್ಳುತ್ತಿರಲು ಸುಮ್ಮನೆ ಯಾಕೆ ತವಡು ಕುಟ್ಟು ತ್ತೀರಿ ? ಆಟಕ್ಕೆ ಪ್ರಾರಂಭವಾಗಲಿ (ಚಟಿಕೆ ಹೊಡಿಯುತ್ತಾನೆ)

(ಆಟಕ್ಕೆ ಪ್ರಾರಂಭವಾಗುತ್ತದೆ)

**ದುಂಡಾ**:—ನಾನು ೫೦೦ ನಿಷ್ಕಗಳನ್ನು ಪಣಕ್ಕೆ ಒಡ್ಡುತ್ತೇನೆ.

**ದುರೋದರ**:—ನಾನು ೧೦೦೦ ನಿಷ್ಕಗಳನ್ನು ಒಡ್ಡುತ್ತೇನೆ.

**ಕುಮುದ**:—ನಾನು ೧೫೦೦.

**ಪುಷ್ಕರ**:—ನಾನು ೨೫೦೦ ನಿಷ್ಕಗಳನ್ನು ಒಡ್ಡುತ್ತೇನೆ.

**ರಾಜಾ**:—ಪುಷ್ಕರನು ನಾಲ್ಕನೆಯ ಮನೆಯಲ್ಲಿದ್ದಾನೆ. ನಾನು ಲೆತ್ತ ಗಳನ್ನು ಚೆಲ್ಲುತ್ತೇನೆ. (ಚೆಲ್ಲುತ್ತಾನೆ)

**ದುಂಡಾ**:—(ಲೆತ್ತಗಳನ್ನು ನೋಡುತ್ತ) ಏನು ಬಿದ್ದಿತೂ........?

**ದುರೋದರ**:—ಏನು ಬಿದ್ದರೇನು ? "ನಾಲ್ಕು" ಬೀಳಲಿಲ್ಲ !!!

**ದುಂಡಾ**:—ಒಗೆಯಿರಿ ಮಹಾರಾಜರೆ, ನನಗೆ ೫೦೦, ಕುಮುದನಿಗೆ ೧೫೦೦, ದುರೋದರನಿಗೆ ೧೦೦೦. ಪುಷ್ಕರರಾಜನಿಗೆ ೨೫೦೦.

**ರಾಜಾ**:—ಅದಕ್ಕೇನು ಬಂದಿದೆ ತೆಗೆದುಕೊಳ್ಳಿರಿ.

**ಕುಮುದ**:—ಮೊದಲು ಮೊದಲು ಪಾಶಗಳು ರಾಜರು ಹೇಳಿದಂತೆ ಬೀಳುತ್ತಿದ್ದವು. ಈಗೇಕೋ ಕಲ್ಲಾಗಿವೆ.

**ದುಂಡಾ:**—ಪಾಶಗಳು ಸೋತಿವೆ! ಹೊಸ ಪಾಶಗಳನ್ನು ತರಿಸ ಬೇಕು.

**ಪುಷ್ಕರ:**—ಪಾಶಗಳು ಸೋತಿವೆ ಅಂದರೇನು ಆಚಾರ್ಯರೆ! ಈ ಸಾರೆ ನಾನು ಒಗೆಯುತ್ತೇನೆ ನೋಡಿರಿ. ಹೇಗೆ ಹೇಳಿದಂತೆ ಬೀಳುತ್ತವೆ. ಎಲ್ಲರೂ ಮತ್ತೆ ಹಣಗಳನ್ನು ಒಡ್ಡಿರಿ. (ಆಟಕ್ಕೆ ಪ್ರಾರಂಭ)

(ಮತ್ತೆ ಆಟ; ರಾಜನು ಮತ್ತೆ ಸೋಲುತ್ತಾನೆ)

**ದುರೋದರ:**—ವಾಹ್ವಾ! ಪುಷ್ಕರರಾಜ!! ಹೇಳಿಕೇಳಿ ಪಾಶಗಳನ್ನು ಒಗೆಯುವಿರಿ. ಆಡಿದ್ದು ಹುಸಿಹೋಗುವದಿಲ್ಲ.

**ದುಂಡಾ:**—ರಾಜರೇ, ನೀವು ಸೋತಿರಿ! ಒಮ್ಮೆ ಸೋಲುಗಾಲ ಬಂದಿತೆಂದರೆ ಕೈತೊಳಕೊಂಡು ಬೆನ್ನೇ ಹತ್ತುತ್ತದೆ. ರಾಜರೇ ನಿವಿನ್ನು ಆಟಾ ಬಿಡಿರಿ!

**ರಾಜಾ:**—ಅದೇಕೆ? ಎಷ್ಟೆಷ್ಟು ಹಣ ಹೋಗುತ್ತದೋ ನೋಡುತ್ತೇನೆ.

**ದ್ಯೂತ:**—ತುಸು ತಡೆಯಿರಿನ್ನು. ಮಧುಸಿಂಗ! ಎಲಾ ಮಧುಸಿಂಗಾ (ಎಂದು ಸೇವಕನನ್ನು ಕರೆಯುತ್ತಾನೆ)

**ಮಧು:**—ಬಂದೆ ಸ್ವಾಮಿಾ. ಏನಾಜ್ಞೆ?

**ದುಂಡಾ:**—(ಅಣಕಿಸಿ) ಏನಾಜ್ಞೆ!! ತೆಗೆ ದೇವೀ ಪ್ರಸಾದವನ್ನು!

**ಮಧು:**—ಸಿದ್ಧ! (ಪಾನಪಾತ್ರೆಗಳಲ್ಲಿ ಸುರೆಯನ್ನು ತುಂಬುತ್ತಾನೆ. ರಾಜನನ್ನು ಬಿಟ್ಟು ಎಲ್ಲರೂ ಕುಡಿಯುತ್ತಾರೆ)

**ಕುಮುದ:**—(ಕುಡಿದು) ಆಃ! ಹಾ!!

ಧಾಟಿ—'ಫೂಲ ಗೆಂದಾನೆ ಮಾರದಿಯಾ'

ಹೇ ಚಿಂತಾನಿವಾರಿಣಿ ಪ್ರಿಯ ಮದಿರೆ। ಹೇ......॥
ಪ್ರಿಯ ಮದಿರೆ ನನ್ನ ಮನೆಯೊಳಿರೆ॥ ಪಲ್ಲ॥
ಉತ್ತೇಜನ ಪರೇ। ಮಣಿ-।
ಮುತ್ಯಾಕೆ ನೀ ಬಾರೆ॥ ೧॥ ಹೇ ಚಿಂತಾ......॥

**ದುರೋದರ:**—(ಟಣ್ಣನೆ ಹಾರಿ ನಿಂತು) ಹೌದಪಾ ಹೌದೋ!! "ಹೇಚಿಂತಾ ನಿವಾರಿಣಿ ಪ್ರಿಯ ಮದಿರೆ" (ಎಂದು ಹಾಡುತ್ತಾ ಕುಣಿಯುತ್ತಾನೆ)

**ದುಂಡಾ:**—ಏನು ಮಾಧುರ್ಯವಿದು ! ನಮ್ಮ ಮಧುಸಿಂಗನಂತೆ ದೇವತೆಗಳಿಗೆ ಸುರೆಯನ್ನು ಸಿದ್ಧ ಮಾಡಲಿಕ್ಕೆ ಬರುತ್ತಿದ್ದರೆ ಅವರು ಆ ನಿಸ್ಸಾರ ವಾದ ಸುಧೆಗಾಗಿ ದೈತ್ಯರೊಡನೆ ಘನಘೋರವಾದ ಸಂಗ್ರಾಮವನ್ನು ಮಾಡು ತ್ತಿದ್ದಿಲ್ಲ ! ಮಹಾರಾಜರೆ, ಒಂದು ಸಾರೆ ನೀವು ಇದನ್ನು ಸೇವಿಸಿ ನೋಡಿರಿ. ನಿಮ್ಮ ಜೀವಕ್ಕೆ ಏನಾದರೂ ಅಪಾಯವಾದರೆ ನಾನಿದ್ದೇನೆ !!

**ದ್ಯೂತ:**—ದುಂಡಾಚಾರೀ ! ಸಾಕು ಸುಮ್ಮನಿರು !! ಯಾರಿಗೆ ಏನನ್ನಬೇಕೆಂಬದರ ವಿಚಾರವೇ ಇಲ್ಲವೇನು ? ರಾಜರಿಗೆ ಏನಾದರೂ ಕೇಳುವ ದಿದ್ದರೆ ಬಹು ವಿನಯದಿಂದ ಕೇಳಬೇಕು !

**ರಾಜಾ:**—(ವಿಷಾದದಿಂದ ನಕ್ಕು) ದುಂಡಾಚಾರಿಯು ಈಗ ದುಂಡಾ ಚಾರಿಯಲ್ಲ ! ಅವನಿಗೆ ಆಡಿ ಫಲವೇನು ? ಇಂಥ ಕೆಲಸ ಮಾಡಬೇಡಿರೆಂದು ನಾನು ನಿಮ್ಮೆಲ್ಲರಿಗೆ ಅನೇಕಾವರ್ತಿ ಹೇಳಿದರೂ ನೀವು ಕೇಳುವುದಿಲ್ಲ. ನಿಮ್ಮ ಮನಸ್ಸು !!

**ದ್ಯೂತ:**—(ತನ್ನಷ್ಟಕ್ಕೆ) ನಲರಾಜಾ, ಹೇಗೆ ಹಣ್ಣಿಗೆ ಬಂದಿರುವಿ ನೀನು !! ಸುರೆಯನ್ನು ಸೇವಿಸಿದವರಿಗೆ ಮೊದಲು ನೀನು ಅತ್ಯುಗ್ರವಾದ ಶಿಕ್ಷೆಯನ್ನು ವಿಧಿಸುತ್ತಿದ್ದಿಯಲ್ಲವೆ ? ಈಗ ನಿನ್ನ ಬಾಯಿಂದ “ಬ್ರ” ಎಂಬ ಅಕ್ಷರವಾದರೂ ಹೊರಡುತ್ತದೇನು ? (ಎದೆಗೆ ಕೈ ಇಟ್ಟುಕೊಂಡು) ಪ್ರತಾಪ ಶಾಲಿಯಾದ ಈ ಕಲಿರಾಜನ ಮಹಿಮೆಯು ಸಾಧಾರಣವಾದದ್ದೆ ?

**ದುಂಡಾ:**—(ರಾಜನನ್ನು ಕುರಿತು) ದೇವರೂ, ಸುರಾಪಾನದ ವಿರುದ್ಧ ವಾಗಿ ನೀವು ಇಲ್ಲಿ ಮಾತೇ ಆಡತಕ್ಕದ್ದಲ್ಲ ! ಈ ನಮ್ಮ ದ್ಯೂತಗೃಹವು, ಈ “ಆನಂದಭವನವು” ನಿಮ್ಮ ಅಧಿಕಾರಕ್ಕೆ ಒಳಗಾಗಿದ್ದಲ್ಲ. ಕಾಶೀಪಟ್ಟಣವು ಭರತಖಂಡದ ಮಧ್ಯದಲ್ಲಿದ್ದರೂ ಹೇಗೆ ಅದೊಂದೇ ಸ್ವತಂತ್ರವಾದ “ ಕಾಶೀ ಖಂಡ ” ವೆನಿಸುವದೋ ಹಾಗೆಯೇ ಈ ನಮ್ಮ “ಆನಂದಭವನವು” ನಿಮ್ಮ ರಾಜ್ಯದ ಮಧ್ಯದಲ್ಲಿದ್ದರೂ ಇದಷ್ಟೇ ಒಂದು ಸ್ವತಂತ್ರವಾದ ರಾಜ್ಯವು !!

**ಎಲ್ಲರು:**—ವಾಹವಾ ದುಂಡಾಚಾರೀ !! ಭಲೇ ದುಂಡಾಚಾರಿ !!!

**ಕುಮುದ:**—ಮಹಾರಾಜ, ನಮ್ಮ ದುಂಡಾಚಾರಿಯಂಥ ಪಂಡಿತನಿಗೆ ಈ ರಾಜ್ಯದ ಧರ್ಮಾಧಿಕಾರಿಯ ಅಧಿಕಾರವನ್ನು ಕೊಡಬಾರದೆ ?

**ಎಲ್ಲರೂ:**—(ನಗುತ್ತಾರೆ)

**ದ್ಯೂತ**:—ಮಹಾರಾಜ, ನಿಮ್ಮ ನಗರರಕ್ಷಕನ ಉದ್ದಾಮತನವನ್ನು ನಾವಿನ್ನು ಸಹಿಸಲಾರೆವು. ನಿನ್ನೆ ರಾತ್ರಿ ಅವನು ನಮ್ಮ ದುರೋದರನನ್ನು ಹಿಡಿದು ಕೂಡಿಸಿ ಅವಮರ್ಯಾದೆಯನ್ನು ಮಾಡಿದನು! ಪ್ರತ್ಯಕ್ಷ ನಾನು ಹೋಗಿ ಹೇಳಿದರೂ ಆ ಮೂರ್ಖನಿಗೆ ಅರಿಕೆಯಾಗಲಿಲ್ಲ. ಈ ದಿವಸ ಸಂಜೆ ಯೊಳಗೆ ಮಹಾರಾಜರು ಅವನನ್ನು ಅಧಿಕಾರದಿಂದ ದೂರಮಾಡಲೇ ಬೇಕು!

**ರಾಜಾ**:—ದ್ಯೂತಸಾಧರೆ, ನೀವು ಹೋಗಿ ಹೇಳಿದರೂ ಕೇಳಲಿಲ್ಲೇ?

**ದ್ಯೂತ**:—ಹೇಳಿದನಿಷ್ಟೇ ಅಲ್ಲ! ಬಹುಪರಿಯಾಗಿ ಬೇಡಿಕೊಂಡರೂ ಅವನು ಕೇಳಲಿಲ್ಲ.

**ರಾಜಾ**:—ಒಳ್ಳೇದು! ಅವನನ್ನು ಅಧಿಕಾರದಿಂದ ದೂರ ಮಾಡು ತ್ತೇನೆ. ಚಿಂತೇ ಬಿಡಿರಿ!!

**ಕುಮುದ**:—ದೇವರೂ, ನಗರರಕ್ಷಕನ ಸ್ಥಳದಲ್ಲಿ ನಮ್ಮ ಮಧುಸಿಂಗ ನನ್ನು ನಿಯಮಿಸತಕ್ಕದ್ದು.

**ರಾಜಾ**:—ಆಗಲಿ!

**ದ್ಯೂತ**:—(ತನ್ನಷ್ಟಕ್ಕೆ) ನಲಚಕ್ರವರ್ತಿ, ಇದೋ! ನಿನ್ನ ತೇಜಸ್ಸೆಲ್ಲ ಅಡಗಿಹೋಯಿತು. ಮಂತ್ರಿಮಂಡಳವು ಚಿಂತೆಯಲ್ಲಿ ಮುಳುಗಿ ಹೋಗಿದೆ. ರಾಜ್ಯದ ಸೂತ್ರಗಳು ಹರಿದು ಗುಂಜುಗುಂಜಾಗಿ ಹೋಗಿವೆ. ಇನ್ನು ಕೆಲಕಾಲ ನಿನ್ನನ್ನು ಅಪಹಾಸ್ಯಾಸ್ಪದನನ್ನಾಗಿ ಮಾಡಿರಿಸಿ ಮುಂದೆ ನಿನ್ನನ್ನು ನಿರಾಯಾಸ ವಾಗಿ ಸ್ಥಾನಭ್ರಷ್ಟನನ್ನಾಗಿ ಮಾಡಿ ಕೂಳಿಗೆ ಗತಿಯಿಲ್ಲದಂತೆ ಮಾಡುವೆನು. ನನಗೆ ವಿರೋಧಿಯಾಗಿ ನಿಲ್ಲಬೇಕೆನ್ನುವಿಯಲ್ಲವೆ?

(ತೆರೆ)

## ಐದನೆಯ ಪ್ರವೇಶವು

(ರಾಜಸಭೆ)

**ರಾಜಾ:**—ಅಮಾತ್ಯರೆ, ನಿಮ್ಮೆಲ್ಲರ ಮನಸ್ಸಿನಲ್ಲಿ ಏನೇನು ವಿಚಾರಗಳು ನಡೆದಿರುವವೆಂಬುದನ್ನು ನಿಮ್ಮ ಮುಖಾವಲೋಕನದಿಂದಲೇ ಊಹಿಸಿರುವೆನು. ಆಗಲಿ ಈ ದಿವಸದ ಸಭೆಯಲ್ಲಿ ನೀವು ಅವಶ್ಯವಾದ ವಿಷಯಗಳ ಬಗ್ಗೆ ಮಾತ್ರ ಮಾತಾಡತಕ್ಕದ್ದು! ಮಾತಾಡುವದಾದರೂ ಬಲು ಜೋಕೆಯಿಂದಲೇ! ತಿಳಿಯಿತೆ?

**ಸಚಿವ:**— (ಅಮಾತ್ಯನನ್ನು ಕುರಿತು) ಅಮಾತ್ಯರೆ, ಲಕ್ಷಣವಂತೂ ನೆಟ್ಟಗೆ ಕಾಣುವದಿಲ್ಲ!

**ಅಮಾತ್ಯ:**— (ಸಚಿವನನ್ನು ಕುರಿತು) ತೋಯಿಸಿಕೊಂಡ ಬಳಿಕ ಮಳೆಯ ಅಂಜಿಕೆಯೇನು? ನಾವು ನಮ್ಮ ಕರ್ತವ್ಯವನ್ನು ಮಾಡಿಯೇ ತೀರೋಣ! (ರಾಜನನ್ನು ಕುರಿತು) ಪ್ರಭುಗಳೆ, ಅಪ್ಪಣೆಯು ಮೀರೆಗೆ ವರ್ತಿಸುತ್ತೇವೆ. ಆದರೂ ಮಹಾರಾಜರ ಹಿತವನ್ನೂ ಈ ನಿಷಧ ರಾಜ್ಯದ ಹಿತವನ್ನೂ ಅನುಲಕ್ಷಿಸಿ ಮಹಾರಾಜರಿಗೆ ಕೆಲವೊಂದು ಸಂಗತಿಯನ್ನು ನಿವೇದಿಸಲು ಸಿದ್ಧರಾಗಿ ನಾವು ಬಂದಿದ್ದೇವೆ.

**ರಾಜಾ:**—ಏನು ಸಂಗತಿಯದು?

**ಅಮಾತ್ಯ:**—ರಾಜ್ಯದ ಸಾಂಪತ್ತಿಕ ಸ್ಥಿತಿಯು ತೀರ ಕೆಟ್ಟುಹೋಗಿದೆ.

**ಸೇನಾ:**—ದೇವರೂ, ಸೈನ್ಯದ ಸಂಬಳವು ಮೂರು ತಿಂಗಳದ್ದು ನಿಂತಿದೆ. ಭಾಂಡಾರದಲ್ಲಿ ಹಣವಿಲ್ಲೆಂದು ಅಮಾತ್ಯರು ಹೇಳುತ್ತಾರೆ. ಏನು ಮಾಡಬೇಕೆಂಬುದನ್ನು ಕೇಳಿಕೊಳ್ಳುತ್ತೇನೆ.

**ರಾಜಾ:**—ಹಣವಿಲ್ಲದಿದ್ದರೆ ನಾನೇನು ಮಾಡಲಿ? ಊರೂರು ಸುಲಿಗೆ ಮಾಡು! ಒಲ್ಲದಿದ್ದರೆ ಸೈನ್ಯವನ್ನು ಕಡಿಮೆ ಮಾಡು!!

**ಸೇನಾ:**—ಮಹಾರಾಜ, ಇವು ಪುಣ್ಯಶ್ಲೋಕರಾದ ನಲಚಕ್ರವರ್ತಿಗಳ ಮುಖದಿಂದ ಹೊರಟ ಶಬ್ದಗಳೇ ಅಹುದೇನು?

**ರಾಜಾ:**—ಯಾಕೆ, ಧೀರೇಂದ್ರ, ನಿನ್ನ ನಾಲಿಗೆ ಬಹಳ ಅಡ್ಡತಿಡ್ಡವಾಗಿ ಹೋಗುತ್ತದೆ; ಉದ್ದಾಗಿರುವದೇನು?

**ಧೀರೇಂದ್ರ:**—(ಆವೇಶದಿಂದ ಮಾತಾಡಲು ಎದ್ದು ನಿಲ್ಲುತ್ತಾನೆ. ಅಮಾತ್ಯನು ಅವನನ್ನು ಜಗ್ಗಿ ಕುಳ್ಳಿರಿಸುತ್ತಾನೆ).

**ಅಮಾತ್ಯ:**—ಪ್ರಭುಗಳು ಈ ವೃದ್ಧನಾದ ಸೇವಕನಾಡುವ ನಾಲ್ಕು ಮಾತುಗಳನ್ನು ಸಮಾಧಾನದಿಂದ ಚಿತ್ತೈಸಬೇಕೆಂದು ಪ್ರಾರ್ಥಿಸುತ್ತೇನೆ. ದೇವರೂ, ವೀರಸೇನ ಮಹಾರಾಜರ ಕಾಲದಲ್ಲಿ ನಾನು ಹೇಳುವ ಮಾತಿಗೆ ಮರ್ಯಾದೆ ಇತ್ತೆಂಬುದನ್ನು ತಾವು ಬಲ್ಲಿರಷ್ಟೆ? ಆ ಮಹಾರಾಜರ ಚಿರಂಜೀವರಿಗೆ ನಾಲ್ಕು ಉಪದೇಶದ ಮಾತುಗಳನ್ನು ಹೇಳಲಿಕ್ಕೆ ಈ ವೃದ್ಧನಿಗೆ ಅಧಿಕಾರವಿರುವದೆಂದು ನಾನು ನಂಬುತ್ತೇನೆ. ರಾಜರು ದ್ಯೂತಾಸಕ್ತರಾದ್ದರಿಂದ ಭಾಂಡಾರದಲ್ಲಿಯ ಹಣವೆಲ್ಲ ಮಟಮಾಯವಾಗಿ ಹೋಯಿತು! ಕೀಳು ಜನರು ತಮ್ಮೊಡನೆ ಸ್ನೇಹವನ್ನು ಕಟ್ಟಿಕೊಂಡಿರುವದರಿಂದ ಆ ಜನರ ಉರವಣಿಗೆಗಾಗಿ ಪ್ರಜಾಜನರ ಸುಖಕ್ಕೂ ಮಹಾರಾಜರ ಕೀರ್ತಿಗೂ ಹಾನಿ ತಟ್ಟುತ್ತಲಿದೆ!

**ರಾಜಾ:**—ತಿಳಿಯಿತು, ಸಾಕುಮಾಡಿರಿ! ನಮಗೆ ನಿಮ್ಮ ಉಪದೇಶವು ಬೇಕಾಗಿಲ್ಲ!!

**ಅಮಾತ್ಯ:**—ಜಗದೊಡೆಯರೆ, ಕಿವಿಗೆ ಇಂಪಾದ ಮಾತುಗಳನ್ನೇ ಹೇಳುವವನು ಮಂತ್ರಿಯಲ್ಲ, ಸಕ್ಕರೆಯನ್ನು ತಿನ್ನ ಹೇಳುವವನು ವೈದ್ಯನಲ್ಲ. ನನ್ನ ಉಪದೇಶವು ತಮಗೆ ಬೇಕಾಗದಿದ್ದರೂ ಹೇಳುವದು ನನಗೆ ಬಿಟ್ಟಿದ್ದಲ್ಲ. ಈಗ ರಾಜರು ನೀಚರಿಗೂ ವಂಚಕರಿಗೂ ವಶರಾದ್ದರಿಂದ ರಾಜ್ಯದಲ್ಲಿ ಅವ್ಯವಸ್ಥೆಯು ಹಬ್ಬಿಕೊಳ್ಳಲಾರಂಭಿಸಿದೆ. ದ್ಯೂತ ಸುರಾಪಾನಗಳ ವ್ಯಸನವು ಹೆಚ್ಚಾಯಿತು. ಮಹಾರಾಜರ ಸ್ನೇಹಿತರಾದ ದ್ಯೂತಕಾರರು ಪ್ರಜಾಜನರನ್ನು ಬಾಧಿಸುತ್ತಲಿದ್ದಾರೆ. ಜನರು ಮೈಮೇಲೆ ಆಭರಣಗಳನ್ನಿಟ್ಟುಕೊಂಡು ಅಡ್ಡಾಡಲಿಕ್ಕೆ ಒಳ್ಳರು! ಹೆಣ್ಣುಮಕ್ಕಳು ಹೊರಗೆ ಮೋರೆ ಹಾಕಲಿಕ್ಕೆ ಒಳ್ಳರು! ಇಂಥ ಅವಸ್ಥೆಯನ್ನು ಮಹಾರಾಜರು ಕಂಡರೂ ಕಾಣದಂತೆ ಕಣ್ಣುಮುಚ್ಚಿಕೊಂಡರೆ ಮುಂದೆ ಗತಿಯೇನು?

**ಸಚಿವ:**—ರಾಜಾಧಿರಾಜ, ಸುಮಂತ ಭೂರಿವಸುವಿನದೇನು ತಪ್ಪು? ಅವನನ್ನು ಅಧಿಕಾರದಿಂದ ತೆಗೆಯುವುದಕ್ಕೆ ಕಾರಣವೇನು? ಅವನ ಸ್ಥಳದಲ್ಲಿ

ಒಬ್ಬ ದ್ಯೂತಕಾರನು ಸುಮಂತನಾಗಿ ಬಂದು ನಮ್ಮ ಸಮಾನಸ್ಕಂಧನಾಗಿ ಕುಳ್ಳಿರಬಹುದೆ?

**ರಾಜಾ:**—ಯಾಕೆ ಸಚಿವರೆ! ನೀವು ಕೂಡ ಬೇಕಾದ ಹಾಗೆ ಮಾತ ನಾಡಲಾರಂಭಿಸಿದಿರಿ! ನನ್ನಿಂದ ನಿಯುಕ್ತನಾದ ಸುಮಂತನು ನಿಮ್ಮ ಸಮಾನಸ್ಕಂಧನೆ!! ಹೆಚ್ಚಿಗೆ ಮಾತಾಡಬೇಡಿರಿ!!!

**ಸೇನಾ:**—ಈ ಅನರ್ಥಗಳೆಲ್ಲ ಹಾಗಿರಲಿ. ರಾಜ್ಯದ ಸದ್ಯ ಸ್ಥಿತಿಯು ಕೆಟ್ಟಿರುವುದನ್ನು ಕಂಡು ಪ್ರತ್ಯಕ್ಷ ಪುಷ್ಕರರಾಜರೇ ಮಹಾರಾಜರ ವಿರುದ್ಧ ವಾಗಿ ದ್ರೋಹವನ್ನು ನಡಸಿರುವರು. ಇನ್ನಾದರೂ ಮಹಾರಾಜರು ಕಣ್ದೆರದು ನೋಡತಕ್ಕದ್ದೆಂದು ರಾಜನಿಷ್ಠನಾದ ನಾನು ಆಗ್ರಹದಿಂದ ಸೂಚಿಸುತ್ತೇನೆ.

**ರಾಜಾ:**— (ಕಡುಕೋಪದಿಂದ) ಧೀರೇಂದ್ರ, ನಿನ್ನ ಮೈಮೇಲೆ ಎಚ್ಚರಿಕೆ ಇದೆಯೋ ಇಲ್ಲವೋ? ಪುಷ್ಕರರಾಜನ ವಿರುದ್ಧವಾಗಿ ನೀನು ಇನ್ನೊಂದಾವರ್ತಿ ಮಾತಾಡಿದೆಯಾದರೆ ನಿನ್ನ ನಾಲಿಗೆಯನ್ನೇ ಸೀಳಿಸಿ ಹಾಕುವೆನು ಗೊತ್ತಿರಲಿ!!!

**ಸೇನಾ:**—(ಕ್ರೋಧಾವೇಶದಿಂದ) ರಾಜನ್, ಈ ಪಾದಸೇವೆಯನ್ನು ನಾನು ಇದುವರೆಗೆ ಮಾಡಿದ್ದು ಸಾಕಾಯಿತು! (ಎಂದು ತನ್ನ ಖಡ್ಗವನ್ನು ತೆಗೆದು ರಾಜನ ಮುಂದೆ ಚಲ್ಲಿಕೊಟ್ಟು ಹೊರಟೆದ್ದು ಹೋಗುತ್ತಾನೆ)

**ರಾಜಾ:**—ಹೋದರೆ ಹೋದ! ಕಂಚುಕೀ, ಆ ಖಡ್ಗವನ್ನು ತೆಗೆದುಕೋ. ಆ ಧೀರೇಂದ್ರನ ತಲೆಮೆಟ್ಟಿ ಹಾರುವಂಥ ಪರಾಕ್ರಮಶಾಲಿಗಳು ನಮ್ಮ ನಗರ ರಕ್ಷಕನ ಕೈಕೆಳಗೆ ಅನೇಕರಿದ್ದಾರೆ.

**ಅಮಾತ್ಯ:**—(ಅಪಹಾಸದಿಂದ ನಕ್ಕು) ಮಹಾರಾಜ, ನಮ್ಮ ಸೇನಾ ಪತಿಯ ತಲೆಮೆಟ್ಟಿ ಹಾರುವವರು ನಿಮ್ಮ ನಗರ ರಕ್ಷಕನ ಕೈಕೆಳಗೆ ಇರುವ ರೇನು? ಧೀರೇಂದ್ರಸಿಂಹನಂಥ ವೀರಾಗ್ರೇಸರನು, ತ್ರಿಭುವನದಲ್ಲಿ ಹುಡುಕಿದರೂ ಸಿಕ್ಕುವದುಂಟೆ? ನನಗೂ ಈ ಸಿಂಹಾಸನದ ಸೇವೆ ಸಾಕಾಯಿತು. ಈ ರಾಜಮುದ್ರೆಯನ್ನು ಮಹಾರಾಜರು ತೆಗೆದುಕೊಳ್ಳಬೇಕು. (ಎಂದು ಅದನ್ನು ಪೀಠದ ಮುಂದೆ ಇರಿಸುತ್ತಾನೆ)

**ರಾಜಾ:**—ಅಮಾತ್ಯರೆ, ಸಾಕಾದರೆ ನೀವೂ ದಯಮಾಡಿರಿ! ನನಗಾ ದರೂ ಪ್ರಧಾನರ ಪೀಡೆ ಸಾಕಾಯಿತು. (ಎಂದು ಸಿಂಹಾಸನದಿಂದೆದ್ದು ಎಷ್ಟು ಮಾತ್ರವೂ ವ್ಯಗ್ರನಾಗದೆ ಸಾವಕಾಶನಾಗಿ ಹೊರಟುಹೋಗುತ್ತಾನೆ)

**ಅಮಾತ್ಯ:**— (ಹಣೆಹಣೆ ಗಟ್ಟಿಸಿಕೊಂಡು) ಆಯಿತು ! ಸಮಾಪ್ತಿಯಾಯಿತು !! ಈ ನಿಷಧ ರಾಜ್ಯವೆಂಬ ರಮ್ಯವಾದ ಉದ್ಯಾನವನ್ನು ನಲರಾಜನೆಂಬ ಗಜನು ಉನ್ಮತ್ತನಾಗಿ ಕಿತ್ತಿ ಈಡಾಡಿ ಹಾಳುಮಾಡುತ್ತಿರುವದನ್ನು ನೋಡುವದಕ್ಕಾಗಿಯೇ, ನಾರಾಯಣಾ ನನ್ನ ಆಯುರ್ಮರ್ಯಾದೆಯನ್ನು ಹೆಚ್ಚಾಗಿ ಬೆಳಿಸಿದಿಯಾ ?

ನಲರಾಜಾ, ನೀನೆಂಥ ಸದ್ಗುಣಿಯು ! ಎಂಥ ವಿಚಾರಶೀಲನು ! ಎಂಥ ರಾಜನೀತಿ ವಿಶಾರದನು ! ಎಂಥ ಪ್ರಜಾವತ್ಸಲನು ! ಒಂದು ಗುಣವೇ, ಎರಡು ಗುಣಗಳೇ !! ಅವನ್ನೆಲ್ಲಾ ಎಲ್ಲಿ ಹಾಳುಮಾಡಿಕೊಂಡಿ !

(ಪ್ರಧಾನರನ್ನು ಕುರಿತು) ಮಹನೀಯರೆ, ಇನ್ನು ನಿಮ್ಮ ರಾಜನಿಷ್ಠೆ, ಕರ್ತವ್ಯದಕ್ಷತೆ, ಜಾಗ್ರತೆ, ಮುಂತಾದವುಗಳ ಪರೀಕ್ಷೆಯು ಸಮಯವು ಬಂದೊದಗಿದೆ ! ಇನ್ನೀ ರಾಜ್ಯವನ್ನು ದುರ್ದಶೆಯಿಂದ ರಕ್ಷಿಸಿಕೊಂಡು ಹೋಗುವ ಭಾರವು ಸಂಪೂರ್ಣವಾಗಿ ನಿಮ್ಮ ತಲೆಯ ಮೇಲೆ ಬಂದಿತು. ರಾಜರು ಆಡಿದ ದುರುಕ್ತಿಗಳನ್ನು ಲಕ್ಷಿಸಬೇಡಿರಿ ! ನಿಮ್ಮಂಥ ಅಭಿಮಾನಿಗಳಾದ ಮಂತ್ರಿಗಳಿದ್ದು ನಿಮ್ಮ ರಾಜ್ಯಕ್ಕೆ ದುರ್ದಶೆ ಬಂದಿತೆಂದರೆ ಉಳಿದ ರಾಷ್ಟ್ರಗಳು ಸರ್ವಥಾ ನಿಮ್ಮನ್ನೇ ನಿಂದಿಸುವರು.

**ಸಚಿವ:**—ಅಮಾತ್ಯರೆ, ಅನುಭವಿಕರಾದ ತಾವು ನಮಗೆ ಮಾರ್ಗ ತೋರಿಸಿಕೊಟ್ಟಂತೆ ನಾವೆಲ್ಲರೂ ದಕ್ಷತೆಯಿಂದ ನಡಕೊಳ್ಳುವೆವು.

**ಅಮಾತ್ಯ:**—ಹಾಗಾದರೆ ನಡೆಯಿರಿ. ನಾವಿನ್ನು ಮಹಾರಾಣಿಯವರ ಬಳಿಗೆ ಹೋಗಿ ನಡೆದ ಸಂಗತಿಗಳನ್ನು ಅವರಿಗೆ ನಿವೇದಿಸೋಣ. ಅವರಾದರೂ ನಾಲ್ಕು ಮಾತುಗಳನ್ನು ಹೇಳಿ ರಾಜರನ್ನು ಸನ್ಮಾರ್ಗಕ್ಕೆ ತರಬಹುದು.

(ತೆರೆ)

## ಆರನೆಯ ಪ್ರವೇಶವು

(ದಮಯಂತಿಯೂ ರಾಜನೂ)

**ದಮಯಂತಿ:**—(ಓರ್ವಳೆ) ಲೋಕಕ್ಕೆ ಬುದ್ಧಿಯನ್ನು ಹೇಳುವಂಥ ಸಾರ್ವಭೌಮರಿಗೆ ಅಬಲೆಯಾದ ನಾನು ಬುದ್ಧಿ ಹೇಳುವ ಸಮಯವು ಬಂದೊದಗಿತೆ ? ಆರ್ಯಪುತ್ರರ ಆಚರಣದ ವಿಷಯವಾಗಿ ಮಂತ್ರಿಗಳು ಹೇಳಿದ ದೂರು ಕೇಳಿ ಜೀವ ಝಲ್ಲೆಂದಿತು.

ಧಾಟಿ:—'ಮದನಾ ಚಂದ್ರಾ ಸುವೈರೀ ತುಝ್ಹಾ ಜಾಹಲಾ'

ಭುವನಾನಂದಾ ವಿವೇಕಾಂಧ ನೀ—ನಾದಿಯಾ ‖ ಪಲ್ಲ ‖
ಘನನೀತಿ ಕೋವಿದ, ಜನಹಿತದೊಳು ರತ—
ನೆನಿಪುದು ಬರಿದಾಯಿತೆ, ಜನೇಂದ್ರಾ ಅಪಕೀರ್ತಿ ನಿನಗಾಯಿತೆ ‖ ೧ ‖
ವಿನಯ ಸುಶೀಲತೆ, ಗುಣಯುತರಭಿಮಾನ—।
ವಿನಿತೆಲ್ಲ ನೀಡಿದೆಯಾ, ಗುಣೌಘಾ, ದ್ಯೂತಾಗ್ನಿಗಾಹುತಿಯಾ ‖ ೨ ‖

ಉಪಾಯವಿಲ್ಲ! ಆದರೂ ಅಮಾತ್ಯರ ಸೂಚನೆಯ ಮೇರೆಗೆ ಆರ್ಯಪುತ್ರರಿಗೆ ನಾಲ್ಕು ಮಾತು ಹೇಳಿ ನೋಡಬೇಕು. ಅವರಂತೂ ನನ್ನ ಮಂದಿರಕ್ಕೆ ಬರುವದನ್ನು ಬಿಟ್ಟು ಮೂರು ನಾಲ್ಕು ತಿಂಗಳಾಗಿ ಹೋದವು. ಹಂಗಸರ ಕಿಟಿಕಿಟಿಗೆ ಬೇಸತ್ತಿರುವರಂತೆ! ಆಗಲಿ ನಾನೇ ಅವರ ಮಂದಿರಕ್ಕೆ ಹೋದರಾಯಿತು. (ಹೋಗುತ್ತಾಳೆ).

(ವಿಚಾರಗ್ರಸ್ತನಾದ ರಾಜನು ಪ್ರವೇಶಿಸುತ್ತಾನೆ)

**ರಾಜಾ:**—ಜೂಜಾಡುವದು ನಿಸ್ಸಂದೇಹವಾಗಿ ಕೆಟ್ಟದ್ದು. ಜೂಜಾಡುವವರಿಗೆ ಮಾನಾಪಮಾನಗಳಿಲ್ಲ; ಒಳಿತು ಕೆಟ್ಟದ್ದರ ಭೇದವಿಲ್ಲ; ಸತ್ಯಾಸತ್ಯತೆಗಳ ಪರೀಕ್ಷೆಯಿಲ್ಲ. ಇದನ್ನೆಲ್ಲ ಅರಿತವನಾದ ನಾನೇ ನಾಚಿಕೆಗೆಟ್ಟು ಪುನಃ ಪುನಃ ದ್ಯೂತದ ಮನೆಗೆ ಎಡತಾಕುತ್ತಿರುವೆನು!! ಪಶುವಿನಂತಿರುವ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ!

ವೀರಸೇನ ಮಹಾರಾಜರಿಗೆ ಸನ್ಮಾನ್ಯರಾಗಿದ್ದ ಅಮಾತ್ಯರ ಅಪಮಾನವನ್ನು ಮಂದಮತಿಯಾದ ನಾನು ಮಾಡಬಹುದೆ? ಆ ಅಮಾತ್ಯರಿಂದಲೇ ನನ್ನ ರಾಜ್ಯವು ಸುಸೂತ್ರವಾಗಿ ನಡೆದಿರುವದಷ್ಟೆ. ರಿಪುಭಯಂಕರನಾದ

ನನ್ನ ಧೀರೇಂದ್ರಸಿಂಹನು ಸಿಟ್ಟಾಗಿ ಹೋದನು. ಅವನು ಹೋದ್ದರಿಂದ ನನ್ನ ಬಲಗೈ ಮುರಿದಂತಾಗಲಿಲ್ಲವೆ? ಅಮಾತ್ಯರು ಹೋದ ಬಳಿಕ ನಾನು ಅಂಧನೇ ಸರಿ. ನನ್ನ ಹಿತವನ್ನೇ ಚಿಂತಿಸಿ ವಿಶುದ್ಧವಾದ ಅಂತಃಕರಣದಿಂದ ನನಗೆ ಬುದ್ಧಿಯ ಮಾತು ಹೇಳಬಂದವರೊಡನೆ ನಾನು ಗುದ್ದಾಡಹೋದೆನು. ಮೂರ್ಖನಿಗೆ ತಲೆ ಒಡೆದವರೂ ಅಷ್ಟೇ!! ಉಪಾಯ ಮಾಡಿದವರೂ ಅಷ್ಟೇ!! ಪೂರ್ವಜನ್ಮದಲ್ಲಿ ನಾನು ಮಾಡಿಬಂದಿರುವ ದುಷ್ಕರ್ಮಗಳ ಪರಿಪಾಕವು ಈ ಜನ್ಮದಲ್ಲಿ ದ್ಯೂತದ ರೂಪದಿಂದ ನನ್ನನ್ನು ಬಾಧಿಸುತ್ತಿರುವದೇ ನಿಶ್ಚಯ.

(ಕಂಚುಕಿಯು ಪ್ರವೇಶಿಸುತ್ತಾನೆ)

**ಕಂಚುಕಿ:**—(ಪ್ರಣಾಮ ಮಾಡಿ) ಮಹಾರಾಜರಿಗೆ ಜಯಜಯಕಾರ ವಿರಲಿ! ದೇವರು ಚಿತ್ತೈಸಬೇಕು. ದುಂಡಾಚಾರ್ಯ ಮಹಾಸ್ವಾಮಿಯವರು ಈ ಪತ್ರವನ್ನು ಮಹಾರಾಜರ ಪಾದಪೀಠಕ್ಕೆ ಸಮರ್ಪಿಸಲು ಹೇಳಿದ್ದಾರೆ. (ಪತ್ರವನ್ನು ಕೊಡುತ್ತಾನೆ)

**ರಾಜಾ:**—(ಪತ್ರವನ್ನೋದುತ್ತಾನೆ)

"ಮಿತ್ರವರ್ಯ, ಮಹಾರಾಜಾಧಿರಾಜ ನಲ ಮಹಾರಾಜರಿಗೆ— ದುಂಡಾಚಾರ್ಯ ಕೃತಾನೇಕ ಆಶೀರ್ವಾದಗಳು. ತರುವಾಯ"

ಈ ನರಾಧಮನು ನನ್ನ ಮಿತ್ರನೆ! ಈ ಸುರಾಭಕ್ತನಿಗೆ ಆಶೀರ್ವಾದ ಮಾಡುವ ಅಧಿಕಾರವೆ!

**ರಾಜಾ:**—(ಪತ್ರವನ್ನು ಮುಂದೆ ಓದುತ್ತಾನೆ)

"ಪುಷ್ಕರರಾಜನು ಸ್ನೇಹಿತರೊಡನೆ 'ಆನಂದಭವನ'ದಲ್ಲಿ ಕುಳಿತಿದ್ದಾನೆ. ಎಲ್ಲರೂ ಮಹಾರಾಜರ ಮಾರ್ಗಪ್ರತೀಕ್ಷೆ ಮಾಡುತ್ತಿರುವರು. ಬೇಗನೆ ದಯ ಮಾಡಬೇಕು" (ಪತ್ರವನ್ನು ಮಡಿಚಿ)

ಪುಷ್ಕರನ ಹೆಸರಿನಲ್ಲಿ ಮೋಹಿನೀ ಮಂತ್ರವಿರುವದೇನು? ಅವನ ಹೆಸರು ಓದಿದಾಕ್ಷಣವೇ ನನ್ನ ಮನಸ್ಸು ಮತ್ತೆ ದ್ಯೂತದ ಕಡೆಗೆ ಹರಿಯ ತೊಡಗಿತು. ಇನ್ನೇನು ಹೋಗಲೇಬೇಕು!!

(ದಮಯಂತಿಯು ಪ್ರವೇಶಿಸುತ್ತಾಳೆ)

**ದಮಯಂತಿ:**— (ತನ್ನಷ್ಟಕ್ಕೆ) ಪುಣ್ಯಕ್ಕೆ ಆರ್ಯಪುತ್ರರು ತಮ್ಮ ವಿಶ್ರಾಮಮಂದಿರದಲ್ಲಿಯೇ ಇರುವರು. (ಮೆಲ್ಲನೆ ರಾಜನ ಸಮೀಪಕ್ಕೆ ಹೋಗಿ) ಅಪ್ಪಯ್ಯ! ಮೋಹವನ್ನುಂಟುಮಾಡುವಂಥ ಈ ಸುಂದರವಾದ ಮುಖದಲ್ಲಿ ನಿಷ್ಠುರತೆಯು ಎದ್ದುಬಡಿಯುತ್ತದಲ್ಲ! ಸಮೀಪಕ್ಕೆ ಹೋಗಲು ಕೂಡ ಹೆದರಿಕೆ ಬರುತ್ತದೆ!!

**ರಾಜಾ:**—ಯಾರು! ದೇವಿ, ಇಲ್ಲಿಗೇನು ಕಾರಣ ಬರೋಣಾಯಿತು?

**ದಮಯಂತಿ:**— (ಹೆದರುತ್ತ ನಕ್ಕು) ನಾನಿಲ್ಲಿಗೆ ಬರಬೇಕಾದರೆ ಕಾರಣ ಬೇಕಾಗುತ್ತದೇನು? ಪ್ರಾಣಕಾಂತರು ಈ ದಾಸಿಯ ಸಮಾಚಾರಕ್ಕೆ ಬಾರದಿರುವದೆ ಕಾರಣವಲ್ಲೆ? ಎಲ್ಲಿಗೋ ಹೋಗುವ ಸಿದ್ಧತೆ ಕಾಣುತ್ತದೆ!

**ರಾಜಾ:**—ಎಲ್ಲಿಗಾದರೂ ಹೋಗುತ್ತೇವೆ. ನಿಮಗೇಕೆ ಬೇಕದು?

**ದಮಯಂತಿ:**— (ಮುಗುಳುನಗೆ ನಕ್ಕು) ಮಾತೇ ಆಡಬಾರದಾಯಿತಲ್ಲ! ನನ್ನ ಮಂದಿರದಲ್ಲಿ ಆರ್ಯಪುತ್ರರ ಪಾದಧೂಳಿಯಿಲ್ಲದೆ ಸಮಗ್ರ ನಾಲ್ಕು ತಿಂಗಳಾದವು. ನಾನು ಮಾಡಿದ ತಪ್ಪನ್ನು ಉಡಿಯಲ್ಲಿ ಹಾಕಬೇಕು!

**ರಾಜಾ:**—ಈ ಅರ್ಧಾಸನದಲ್ಲಿ ಮೊದಲು ವಿಶ್ರಮಿಸಿಕೊಳ್ಳಿರಿ, ಬಳಿಕ ತಪ್ಪಿನ ವಿಚಾರ ಮಾಡೋಣಂತೆ! (ಎಂದು ದಮಯಂತಿಯ ಕೈಹಿಡಿದು ಕುಳ್ಳಿರಿಸಿಕೊಂಡು) ಅಹಹಾ; ! (ತನ್ನಷ್ಟಕ್ಕೆ)

ಧಾಟಿ:—'ಧಪಮಾ ಪಾಧಪಧಾ ಧಾಸಾ'

ಸತಿಯೋಂ ಪಾವನಳ್ಕೆ ಅಹಾ ॥
ಪತಿವ್ರತಾಮಣಿ-ಯಿವಳು ಮಂಗಲಾಂಗಿ ॥ ಪಲ್ಲ ॥
ಪರಮಚರಿತೆಯಾ ಕರವನು ನಾಂ ।
ಧರಿಸಿದಾಕ್ಷಣದೊಳೇಂ ದುರಿತ ತಾಂ ॥
ದೂರಾಯ್ತೇನ್ಯೆ ನೋಡೀ ಸಮಯದಲಿ ಗಡಾ ॥
ನೀನೇ ಧನ್ಯ ಮಂಗಲಾಂಗಿ ॥ ೧ ॥

**ದಮಯಂತಿ:**—(ಮಂಚದಲ್ಲಿ ದೂರ ಸರಿದು ಕುಳಿತು) ದಾಕ್ಷಿಣ್ಯಕ್ಕಾಗಿ ತೋರಿಸಿದ ಈ ಒಣ ಉಪಚಾರಗಳೆಲ್ಲ ನಮಗೆ ತಿಳಿಯುತ್ತವೆ! (ಎಂದು ಮಂದಹಾಸಗೈಯ್ಯುತ್ತಾಳೆ)

**ರಾಜಾ:**—(ತನ್ನಷ್ಟಕ್ಕೆ) ದ್ಯೂತಾಸಕ್ತನಾದುದರಿಂದ ನಾನು ಈ ಚಾರು ಗಾತ್ರಿಯ ಮಂದಿರಕ್ಕೆ ಹೋಗುವದನ್ನು ಕೂಡ ಮರೆತುಬಿಟ್ಟದ್ದರಿಂದ ಈ ಸುಶೀಲೆಗೆ ನನ್ನಲ್ಲಿ ಅನಾದರವು ಹುಟ್ಟಿರುವುದೇನು? ದ್ಯೂತದ ಹಾಳು ವ್ಯಸನವನ್ನು ಬಿಟ್ಟುಕೊಡಬೇಕೆಂದು ನಾನು ಎಷ್ಟಾವರ್ತಿ ನಿಶ್ಚಯಮಾಡಿ ಕೊಂಡರೂ ಅದು ಬಿಡಲೊಲ್ಲದು! (ಪ್ರಕಾಶವಾಗಿ) ಪ್ರಿಯೆ, ಹಾಗೆ ದೂರ ಕುಳಿತಿರುವುದೇಕೆ? (ಎಂದು ಆವಳ ಹೆಗಲ ಮೇಲೆ ಕೈಹಾಕುತ್ತಾನೆ.)

**ದಮಯಂತಿ:**—(ಹುಸಿ ರೋಷವನ್ನು ನಟಿಸಿ) ಕಣ್ಣಿಗೆ ಇಂಗು ತಗುಲಿ ಸುವಂಥ ಈ ಬುಬ್ಬುಣಾಚಾರವು ನನಗೆ ಬೇಕಾಗಿಲ್ಲ. (ರಾಜನ ಕೈ ತೆಗೆದು ಹಾಕುತ್ತಾಳೆ)

**ರಾಜಾ:**—(ದಮಯಂತಿಯನ್ನು ಬಲಾತ್ಕಾರದಿಂದ ಚುಂಬಿಸಿ) ಪ್ರಿಯೆ, ನಾನು ಮಾಡಿದ ಅಪರಾಧವಾದರೂ ಯಾವದು? ಇಷ್ಟು ರೋಷವೇಕೆ?

**ದಮಯಂತಿ:**—ಆದಿರಲಿ! ಈಗ ಪ್ರಾಣನಾಥರು ಹೊರಟಿರುವದೆಲ್ಲಿಗೆ?

**ರಾಜಾ:**—ಅದನ್ನು ನಾನು ಹೇಳುವಂತೆ ಇಲ್ಲ.

**ದಮಯಂತಿ:**—ನೀವು ಹೇಳದಿದ್ದರೂ ನನಗೆ ತಿಳಿದಿದೆ. ಈ ದಿವಸ ಪ್ರಾಣನಾಥರು ಹೊರಗೆ ಹೋಗಲಾಗದು.

**ರಾಜಾ:**—ಹೀಗಂದರೇನು ಪ್ರಿಯೆ?

**ದಮಯಂತಿ:**—ಅಂದರೆ, ನಿಮ್ಮನ್ನು ಜೂಜಾಡಲಿಕ್ಕೆ ನಾನು ಹೋಗ ಗೊಡುವದಿಲ್ಲ;

**ರಾಜಾ:**— (ಕ್ರೋಧದಿಂದ) ಹಾಗೆ ಹೆಚ್ಚಿಗೆ ಮಾತಾಡಬಾರದು ತಿಳಿಯಿತೆ?

**ದಮಯಂತಿ:**—ಆಹಾ?! ಇಂಥ ಕ್ರೋಧಾವೇಶಕ್ಕೆ ಪರಬಲವು ಅಂಜಿ ಥರಥರನೆ ನಡುಗಬಹುದು. ಆದರೆ ದಮಯಂತಿಯು ಮಾತ್ರ ಈ ಕ್ರೋಧಾ ಗ್ನಿಯೆಂದರೆ ಕೇವಲ ಚಂದ್ರಿಕೆಯೆಂದೇ ತಿಳಿಯುವಳು.

**ರಾಜಾ:**—ನಾನು ಹೋದರೆ ನೀನೇನು ಮಾಡುವಾಕೆ?

**ದಮಯಂತಿ:**—ನನ್ನ ಪತಿರಾಜರನ್ನು ಅಮಾರ್ಗಕ್ಕೆ ಹೋಗ ಗೊಡದಿರುವದು ನನ್ನ ಅಧಿಕಾರವು. ಹೇಗೆ ಹೋಗುತ್ತೀರಿ? ಹೋಗಿರಿ ನೋಡೋಣ!!

**ರಾಜಾ:**—ಸ್ತ್ರೀಯೆ, ಇಂಥ ಚೇಷ್ಟೆಗಳನ್ನು ನೀನು ಅಂತಃಪುರದಲ್ಲಿ ಮಾತ್ರ ಮಾಡತಕ್ಕದ್ದು !! ಎದ್ದು ನಡೆ ಇಲ್ಲಿಂದ !!!

**ದಮಯಂತಿ:**—ಏನು ದುರುಕ್ತಿ ಇದು !!! (ಎದ್ದು ನಿಂತು ಕ್ರೋಧಾವೇಶದಿಂದ) ಮಹಾರಾಜರೆ, ನಾನು ಯಾರೆಂದು ತಿಳಿದಿರುವಿರಿ !? ಈ ನಿಷಧ ದೇಶದ ಸಾರ್ವಭೌಮಿನಿಯು ನಾನು !

**ರಾಜಾ:**—(ವಿಸ್ಮಯಾಕುಲನಾಗಿ ಎದ್ದು ನಿಂತು)

ಧಾಟಿ:—'ಅಧಮ ಕಿತಿ ಪಾಲಕಾ ಅಸಸಿ ಭೂಪಾ'

ಪ್ರಖರತರ ತೇಜವೇಂ ಚಮಕಿಸುವುದೈ ॥
ಮುಖರಿಸುವ ಸಿಡಿಲೇಕೆ, ಪ್ರೇಮಲತೆಯೋ ॥ ಪಲ್ಲ ॥
ಪ್ರಾಣಕಾಂತೆಯು ಕೋಪ-ವಿಂತು ಭೀಕರವಾಗೆ ।
ಕ್ಷೋಣಿಯೊಳು ಪತಿವ್ರತಾಮಣಿಗಳೀವರು ॥
ಕಾಣುತಲೆ ದುರುಳರಂ ದಹಿಸುವರು ಕೋಪದಿಂ ।
ಜಾಣರಿಂತೆಂಬ ನುಡಿ ಸತ್ಯವಹುದೈ ॥ ೧ ॥

(ದಮಯಂತಿಯನ್ನು ಕುರಿತು ವಿನಯದಿಂದ) ದೇವಿ, ಕ್ಷಮಿಸು; ನನ್ನಿಂದ ತುಸು ಅನುಚಿತವಾದದ್ದು ನಿಜ !

**ದಮಯಂತಿ:**— (ಕಣ್ಣೊರಿಸಿಕೊಂಡು) ಪ್ರಾಣದರಸೆ, ವಿಷಾದದ ಭರದಲ್ಲಿ ನಾನೇ ತುಸು ಮರ್ಯಾದೆಯನ್ನು ಮೀರಿ ಮಾತಾಡಿದೆನು. ಕ್ಷಮೆಯನ್ನು ಬೇಡಿಕೊಳ್ಳತಕ್ಕವಳು ನಾನೇ. (ತಲೆಬಾಗಿಸಿ ಕೈಜೋಡಿಸುತ್ತಾಳೆ)

**ರಾಜಾ:**—ಮನೋರಮೆ, ಕ್ಷಮಿಸಲಿಕ್ಕಂತೂ ನಾನು ಸಿದ್ಧನೇ ! ನಾನು ತುಸು ಹೋಗಿಬರುತ್ತೇನೆ; ಅಪ್ಪಣೆ ಕೊಡು.

**ದಮಯಂತಿ:**—ಅದೊಂದು ಮಾತು ಬಿಟ್ಟು ಆರ್ಯಪುತ್ರರು ಈ ದಾಸಿಗೆ ಬೇಕಾದ ಆಜ್ಞೆಯನ್ನು ವಿಧಿಸಬೇಕು. ಈ ದಿವಸ ನಾನು ಆರ್ಯಪುತ್ರರನ್ನು ದ್ಯೂತದ ದುರ್ಮಾರ್ಗಕ್ಕೆ ಎಂದಿಗೂ ಹೋಗಗೊಡುವದಿಲ್ಲ !!

**ರಾಜಾ:**—ನಾನು ಜೂಜಾಡುವನೆಂದು ತಿಳಿ. ಅದರಿಂದ ಕೆಡುವದೇನು ? ಬಹಳಾದರೆ ನೂರಾರು ನಿಷ್ಕಗಳನ್ನು ಸೋತುಬರುವೆನಷ್ಟೆ ?

**ದಮಯಂತಿ:**— ದುಷ್ಕರ್ಮ ನಮ್ಮದೆಂದೇ ದುರ್ಮಾರ್ಗಿಗಳನ್ನು ದಂಡಿಸುವವರಾದ ರಾಜರ ಮುಖದಿಂದ ಇಂಥ ಅವಿವೇಕವಾದ ನುಡಿಯನ್ನು

ಕೇಳಿದೆನು. ಅರಮನೆಯ ಸಂಪತ್ತೆಲ್ಲ ತೊಳೆದುಹೋಯಿತು ! ಈ ದ್ಯೂತದಿಂದ ಅಮಾತ್ಯರ ಭಾಂಡಾರವೆಲ್ಲ ಬರಿದಾಗಿ ಹೋಯಿತಂತೆ ! ನೀಚರ ಸಹವಾಸದಿಂದ ನಿಮ್ಮ ಸದ್ಗುಣಗಳೆಲ್ಲ ಅಡಗಿಹೋದವು. ಕೃತಾಪರಾಧದದಂಶದಿಂದ ಮುಖದ ವರ್ಚಸ್ಸೆಲ್ಲ ಕೆಟ್ಟುಹೋಗಿದೆ. ದುರುಳರ ಮೋಸಕ್ಕೊಳಗಾಗಿ ರಾಜ್ಯದ ಆಧಾರಸ್ತಂಭರಾಗಿರುವ ಅಮಾತ್ಯರೇ ಮುಂತಾದವರ ಮಾನಭಂಗವನ್ನು ಮಾಡಿ ದ್ರೋಹಿಗಳೂ ಕೃತಘ್ನರೂ ಆದವರನ್ನು ಮುಂದಕ್ಕೆ ಕರೆಯುವಿರಿ ! ಹೀಗಾದ್ದರಿಂದ ರಾಜ್ಯದಲ್ಲಿ ಅನೇಕ ದುಷ್ಪರಿಣಾಮಗಳುಂಟಾಗಿ ಪ್ರಜಾಜನರಿಗೆ ಅಸಹ್ಯವಾದ ಪೀಡೆಯನ್ನು ಅನುಭವಿಸಬೇಕಾಗಿದೆ. ಪ್ರಜಾಪೀಡನದಿಂದ ಹುಟ್ಟಿದ ಬೆಂಕಿಯು ಅರಸನ ಐಶ್ವರ್ಯವನ್ನೂ ಕುಲವನ್ನೂ ಕೂಡಿಯೇ ಸುಟ್ಟುಬಿಡುವದೆಂದು ಮಹರ್ಷಿಗಳು ಸಾರಿ ಹೇಳಿರುವರು. ನೀವು ಈ ದ್ಯೂತದ ವ್ಯಸನವನ್ನು ಬಿಟ್ಟುಬಿಡಿರಿ, ವೃಥಾಭಿಮಾನಕ್ಕೆ ಈಡಾಗಬೇಡಿರಿ ! ಮುಂಚಿನಂತೆ ದಕ್ಷತೆಯಿಂದ ಪ್ರಜರ ಹಿತವನ್ನು ಚಿಂತಿಸಿ ಅವರ ಹರಿಕೆಯನ್ನು ಪಡುಕೊಳ್ಳಿರಿ.

**ರಾಜಾ:**—ಮುಗಿಯಿತೆ ನಿನ್ನ ವ್ಯಾಖ್ಯಾನ ? ಕೇಳುತ್ತ ಕೂಡ್ರುವಂತೆ ಇಲ್ಲ. ನನಗೆ ಹೋಗಬೇಕಾಗಿದೆ !

**ದಮಯಂತಿ:**—ವ್ಯಾಖ್ಯಾನವೇಕೆ ? ನಮ್ಮ ಕಥೆಯೇ ಮುಗಿದಂತಾಗಿದೆ ! ಮಹಾರಾಜರು ಹೋಗಲೇಬೇಕಾಗಿದ್ದರೆ ಈ ದುರ್ಭಾಗ್ಯಳಾದ ದಾಸಿಯನ್ನು ಸಂಹರಿಸಿ ಆಮೇಲೆ ಯಥೇಷ್ಟವಾಗಿ ಹೋಗಬಹುದು. (ರಾಜನನ್ನು ಅಡ್ಡಕಟ್ಟುತ್ತಾಳೆ.)

**ರಾಜಾ:**—ದಮಯಂತಿ, ವಿಷಪರೀಕ್ಷೆ ಮಾಡಬೇಡ. ಸುಮ್ಮಗೆ ಹಾದೀ ಬಿಡು.

**ದಮಯಂತಿ:**— (ಕಣ್ಣೀರು ತಂದು ದುಃಖಿಸುತ್ತ) ಆರ್ಯಪುತ್ರರೆ ಬೇಡಿರಿ ! ಬೇಡಿರಿ !! ಈ ದುರಾಗ್ರಹವು ಸರಿಯಲ್ಲ ಕಂಡಿರಾ ? (ಎಂದು ರಾಜನ ಕಾಲು ಹಿಡಿಯುತ್ತಾಳೆ)

**ರಾಜಾ:**—ಸೊತ್ತೇ ನಡೆಯತ್ತ ! (ಎಂದು ದಮಯಂತಿಯನ್ನು ಕಾಲಿಲೆ ನೂಕಿ ಹೊರಟುಹೋಗುತ್ತಾನೆ.)

(ತೆರೆ)

**ಮೂರನೆಯ ಅಂಕವು ಸಮಾಪ್ತವು**

## ನಾಲ್ಕನೆಯ ಅಂಕವು

### ಮೊದಲನೆಯ ಪ್ರವೇಶವು

ಸ್ಥಳ:—ನಿಷಧಪುರದ ಹೊರಗಿನ ಬಯಲು.

(ಈರ್ವರು ಸೈನ್ಯಾಧಿಕಾರಿಗಳು)

**ಗಂಭೀರಸಿಂಹ:**—ಐ! ಯಾರವರು ಇಷ್ಟು ರಾತ್ರಿಯಲ್ಲಿ?

**ಶತ್ರುಜಿತ್‌ಸಿಂಹ:**—ನಾನೊಬ್ಬ ನಗರವಾಸಿಯು. (ಗಂಭೀರಸಿಂಹನ ಸಮೀಪಕ್ಕೆ ಬಂದು) ಗಂಭೀರಸಿಂಹನೇನು? "ಜಯ ನಲಮಹಾರಾಜ" (ಎಂದು ಪ್ರಣಾಮ ಮಾಡುತ್ತಾನೆ).

**ಗಂಭೀರ:**—"ಜಯ ನಲಮಹಾರಾಜ" (ಎಂದು ಪ್ರಣಾಮ ಮಾಡಿ) ಶತ್ರುಜಿತ್‌ಸಿಂಹ? ಯಾವಾಗ ಬಂದಿ? ನಲಮಹಾರಾಜರ ವರ್ತಮಾನ ವೇನು? ಕ್ಷೇಮವಷ್ಟೆ?

**ಶತ್ರುಜಿತ್:**—ಗಂಭೀರಸಿಂಹ, ಜೀವದಿಂದಿದ್ದು ಶ್ವಾಸವನ್ನು ಬಿಡುವ ದಕ್ಕೆ ಕ್ಷೇಮವೆಂದರೆ ಕ್ಷೇಮವು! ಮಹೇಂದ್ರನಂತೆ ವೈಭವಶಾಲಿಗಳೂ, ಕಾರ್ತಿಕೇಯನಂತೆ ಪರಾಕ್ರಮಿಗಳೂ ಆಗಿರುವ ಮಹಾರಾಜರಿಗೆ ವೇಷಾಂತರ ವನ್ನು ತೊಟ್ಟು ದೇಶತ್ಯಾಗವನ್ನು ಮಾಡಬೇಕಾಯಿತು! ಮಮತೆ ದಯೆ ಮುಂತಾದ ಪ್ರೇಮಲವಾದ ಗುಣಗಳಿಗೆ ಆಧಾರಭೂತರಾದ ಮಹಾರಾಣಿ ಯವರಿಗೆ ಅಮಂಗಲವಾದ ಯೋಗಿನಿಯ ವೇಷವೇ? ಅಧಮನಾದ ನಾನೇ ಅವರನ್ನು ದೂರ ಶಾರ್ದೂಲಾರಣ್ಯದಲ್ಲಿ ಬಿಟ್ಟು ಬಂದೆನು. ಈ ರಾಷ್ಟ್ರಕ್ಕೆ ಜೀವನಭೂತರಾಗಿರುವ ಮಹಾರಾಜ ಮಹಾರಾಜ್ಞಿಯವರು ಹೊರಟು ಹೋದ ಬಳಿಕ ಶವದಂತೆ ಅಮಂಗಲವಾಗಿ ತೋರುವ ಈ ಹಾಳು ಊರಲ್ಲಿ ಪ್ರವೇಶ ಮಾಡಲಿಕ್ಕೆ ಮನಸ್ಸಾಗದೆ ಇಲ್ಲಿಯೇ ಈ ಅಶ್ವತ್ಥದ ಕಟ್ಟೆಯ ಮೇಲೆ ಬಿದ್ದು ಕೊಂಡಿದ್ದೆನು.

**ಗಂಭೀರ:**—ಶಿವ! ಶಿವ!! ತ್ರಿಭುವನೈಕ ವೀರರಾದ ನಮ್ಮ ಮಹಾ ರಾಜರಿಗೆ ವೇಷಾಂತರವನ್ನು ತಾಳಿ ದೇಶತ್ಯಾಗವನ್ನು ಮಾಡುವಂಥ ಪ್ರಸಂಗವು

ಬಂದೊದಗಿತಲ್ಲೆ !!! ಶತ್ರುಜಿತ್, ಅಂಥ ಪ್ರಸಂಗದಲ್ಲಿ ನೀನು ಮಹಾರಾಜರ ಬಳಿಯಲ್ಲಿದ್ದು ಅವರ ಸೇವೆ ಮಾಡಿದಿ; ನೀನೇ ಧನ್ಯನು !

**ಶತ್ರುಜಿತ್**:— (ಆರ್ತಸ್ವರದಿಂದ) ಗಂಭೀರಸಿಂಹ, ಇಂಥ ಧನ್ಯತೆಯು ಯಾರಾರಿಗೂ ಬೇಡ ಕಂಡಿಯಾ !! ನಲರಾಜ ದಮಯಂತೀ ದೇವಿಯರನ್ನು ಅಡವಿಗೀಡು ಮಾಡಿಬಂದ ಪಾಪಿಯು ನಾನು ! ನಾನು ಧನ್ಯನೆ ?

**ಗಂಭೀರ**:—ಉಪಾಯವಿಲ್ಲ ! (ಶತ್ರುಜಿತ್ತನ ಭುಜದ ಮೇಲೆ ಕೈಯಿಟ್ಟು) ಮಿತ್ರಾ, ಮಹಾರಾಜರಿಗೆ ಪರಮ ಪ್ರಿಯನಾದ ಅಂಗರಕ್ಷಕನು ನೀನು ! ಅವರನ್ನು ನೀನು ಬಿಟ್ಟು ಬಂದದ್ದು ಹೇಗೆ ?

**ಶತ್ರುಜಿತ್**:—ಮಹಾರಾಜರ ಪಾದಗಳನ್ನು ಅಗಲಿರಲಾರೆನೆಂದು ನಾನೆಷ್ಟುಪರಿಯಾಗಿ ಅಲ್ಪರೆದು ಹೇಳಿಕೊಂಡರೂ ಅವರು ಕೇಳಲಿಲ್ಲ. ರಾಜಕಾರಣಕ್ಕಾಗಿ ತಮಗೆ ವನವಾಸವನ್ನು ಕೈಕೊಳ್ಳಬೇಕಾಗಿದೆಯೆಂದು ನನಗೆ ಹೇಳಿ “ ನೀನು ನಿನ್ನ ಸೇನಾಪತಿಯ ಬಳಿಗೆ ಹೋಗಬೇಕು ” ಎಂದು ಮಹಾರಾಜರು ತಮ್ಮ ಆಣೆಯನ್ನಿಟ್ಟು ನಿಷ್ಠುರವಾಗಿ ಆಜ್ಞಾಪಿಸಿದ್ದರಿಂದ ನಿರ್ವಾಹವಿಲ್ಲದೆ ಹತಾಶನಾಗಿ ನಾನು ಮರಳಿ ಬಂದೆನು.

**ಗಂಭೀರ**:—( ವ್ಯಸನದಿಂದ ಆಕಾಶದ ಕಡೆಗೆ ನೋಡಿ ಮಾಡಿ ) ಹೇ ಸುಜನಪಾಲಕಾ ನಾರಾಯಣಾ ! ನೀನು ನಿನ್ನ ಅನಂತವಾದ ಬಾಹುಗಳಿಂದ ಪ್ರಜಾವತ್ಸಲರಾದ ನಮ್ಮ ಮಹಾರಾಜರನ್ನು ಕಾಪಾಡು ಕಂಡಿಯಾ ? (ಶತ್ರುಜಿತ್ತನ ಭುಜದ ಮೇಲೆ ಕೈ ಇಟ್ಟು) ಏನು ಮಾಡವದು ಶತ್ರುಜಿತ್‌ಸಿಂಹ ! ಸೇನಾಪತಿಗಳ ಆಜ್ಞೆಯನ್ನು ಮೀರಲಾರದೆ ನಾವೆಲ್ಲರೂ ಹತವೀರ್ಯರಂತೆ ಈ ಅನರ್ಥಗಳನ್ನೆಲ್ಲ ನೋಡಬೇಕಾಯಿತು !

**ಶತ್ರುಜಿತ್**:—ಅಹುದು ! ರಾಜಕಾರಣವನ್ನು ನೆನೆದು ಮಂತ್ರಿಮಂಡಳದವರು, ಒಂದು ವರ್ಷದ ವರೆಗೆ ಹೇಗಾದರೂ ಮಾಡಿ ಸುಮ್ಮನಿರತಕ್ಕದ್ದೆಂದು ನಮ್ಮ ಸೇನಾಪತಿಗಳಿಗೆ ಸೂಚಿಸಿದರು. ಇಲ್ಲದಿದ್ದರೆ ಪ್ರಳಯಕಾಲದ ರುದ್ರನಂತಿರುವ ನಮ್ಮ ಧೀರೇಂದ್ರಸಿಂಹರು ಮಹಾರಾಜರನ್ನು ಹಾಗೆ ಹೋಗಗೊಡುತ್ತಿದ್ದರೆ ? ತ್ರಿಭುವನಗಳನ್ನು ಅಲ್ಲೋಲಕಲ್ಲೋಲವಾಗಿ ಮಾಡಿ ಬಿಡುತ್ತಿದ್ದರು !!

**ಗಂಭೀರ:**—ದೈವಗತಿಯು ದುರ್ವಿಪಾಕವೇ ಮತ್ತಿನ್ನೇನು!

**ಶತ್ರುಜಿತ್:**—ದೈವವೆ! ಮಹಾರಾಜರು ಯಾವ ಜನ್ಮದಲ್ಲಿ ತಪ್ಪು ಮಾಡಿದ್ದರೆಂದು ನೀನು ನಿನ್ನ ಬಲೆಯನ್ನು ಅವರ ಮೇಲೆ ಒಗೆದಿ? ಆಗಲಿ, ಒಂದು ವರ್ಷವು ಮುಗಿದ ಕ್ಷಣವೇ ನಿನ್ನಾಟವನ್ನು ನೋಡುವೆನಂತೆ!!?

**ಗಂಭೀರ:**—ಒಂದು ವರ್ಷದ ವರೆಗಾದರೂ ಪ್ರಜರು ಪುಷ್ಕರನ ಆಳಿಕೆಯ ಹಾವಳಿಯನ್ನು ಹೇಗೆ ಸೈರಿಸುವರೋ ದೇವರೇ ಬಲ್ಲ! ಮೊನ್ನಿನ ದಿವಸ ಅರಸನ ಪ್ರೀತ್ಯಾಸ್ಪದರಾದ ಕಳ್ಳರು ಲಕ್ಷ್ಮೀದತ್ತನ ಮನೆಯನ್ನು ಹಗಲುಹಾಡೇ ಸುಲಿದರು. ಪ್ರೇಮಚಂದ್ರನ ರೂಪವತಿಯಾದ ಮಗಳನ್ನು ನಿನ್ನೇ ರಾತ್ರಿ ಪುಷ್ಕರನು ತನ್ನ ವಿಲಾಸಮಂದಿರಕ್ಕೆ ಎಳದೊಯ್ದನು! ಕಣ್ಣು ಕೀಳಿಸಿಕೊಳ್ಳಬಹುದು, ಇಂಥ ಅನರ್ಥಗಳನ್ನು ನೋಡಲಸವಲ್ಲ!!

**ಶತ್ರುಜಿತ್:**—ಏನೆಂದಿ? ಇಂಥ ಅನರ್ಥಗಳನ್ನು ನೀನು ಪ್ರತ್ಯಕ್ಷವಾಗಿ ನೋಡಿ ಸುಮ್ಮನಿದ್ದಿಯಾ? ಧಿಕ್ಕಾರ! ಧಿಕ್ಕಾರವಿರಲಿ ಕ್ಷತ್ರಿಯರೆಂಬವರಿಗೆ! ಗಂಭೀರ, ಶಸ್ತ್ರಾಸ್ತ್ರಗಳನ್ನು ತೊಟ್ಟವನಾದ ನೀನು ಹೆಂಗಸಿನಂತೆ ಇದನ್ನೆಲ್ಲ ನೋಡಿ ನನಗೆ ಮೋರೆ ತೋರಿಸಲಿಕ್ಕೆ ಬಂದಿರುವಿಯಾ! ನಡೆ! ಇಲ್ಲಿ ನಿಲ್ಲಬೇಡ!! (ಗಂಭೀರನ ಕಡೆಗೆ ಬೆನ್ನುಮಾಡಿ ನಿಂತು) ಪುಷ್ಕರನನ್ನು ಆಗಲೇ ತುಂಡುತುಂಡಾಗಿ ಮಾಡಲಿಕ್ಕೆ ಈ ನಗರದಲ್ಲಿ ಒಬ್ಬ ಕ್ಷತ್ರಿಯನಾದರೂ ಉಳಿಯಲಿಲ್ಲವೆ! ದಿನಮಣಿಯಂತೆ ತೇಜಸ್ವಿಯಾದ ನಲಸಾರ್ವಭೌಮನೆ, ನೀನು ತೆರಳಿದ ಕೂಡಲೆ ಇಂಥ ಅನ್ಯಾಯದ ಅಂಧಕಾರವೆ! ಹರಿ! ಹರಿ!! ಹರಿ!!!

**ಗಂಭೀರ:**— ಶತ್ರುಜಿತ್‌ಸಿಂಹ, ನಾನು ಹೇಡಿಯಾಗಿ ನಡೆದಿದ್ದರೆ ಇಕೋ ಈಗಲೆ ನನ್ನ ತಲೆ ಕಡಿದುಹಾಕು! (ಎಂದು ತಲೆಬಾಗಿಸಿ ನಿಲ್ಲುತ್ತಾನೆ)

**ಶತ್ರುಜಿತ್:**—ಆಹಾ! ಪರಾಕ್ರಮವನ್ನೇ ಮಾಡಿರುವಿ!! (ಎಂದು ಅಪಹಾಸದಿಂದ ನಗುತ್ತಾನೆ).

**ಗಂಭೀರ:**—ನಾನೇನು ಮಾಡಬಹುದಾಗಿತ್ತು ಶತ್ರುಜಿತ್! ನಾವು ಎಲ್ಲರೂ ಮಂತ್ರಿಮಂಡಲಕ್ಕೆ ಕೊಟ್ಟ ವಚನಕ್ಕಾಗಿ ಹೆಂಗಸರಂತೆ ಅದನ್ನೆಲ್ಲ ನೋಡಬೇಕಾಯಿತಷ್ಟೆ!? ವಚನವನ್ನು ಕೊಡುವಾಗಲೇ ನಮ್ಮ ನಾಲಿಗೆ

ಗಳು ಕಡಿದು ಬಿದ್ದಿದ್ದರೆ ಒಳ್ಳೇದಾಗುತ್ತಿತ್ತು! (ಮುಖವನ್ನು ಕೆಳಗೆ ಮಾಡಿ ಕೊಂಡು ನಿಲ್ಲುತ್ತಾನೆ).

**ಶತ್ರುಜಿತ್:**— (ಆದರದಿಂದ ಗಂಭೀರನ ಕೈಹಿಡಿದು) ವಿಕ್ರಮಶಾಲಿ ಯಾದ ಮಿತ್ರನೆ, ಆವೇಶದಲ್ಲಿ ನಾನಾಡಿದ ಬಿರನುಡಿಗಳಿಗಾಗಿ ನನ್ನನ್ನು ಕ್ಷಮಿಸು! ನಿನ್ನದೇನೂ ತಪ್ಪಿಲ್ಲ! ಆ ಕಾಲದಲ್ಲಿ ನಾವು ವಚನವನ್ನೇ ಕೊಡಬಾರದಾಗಿತ್ತು. ಆಗಲಿ! ಈ ಹಾವಳಿಯೆಲ್ಲ ಒಂದೇ ವರ್ಷದ್ದಲ್ಲೆ?

**ಗಂಭೀರ:**—ಅಷ್ಟೆಯೇ. ವಿಜಯಾದಶಿಮಿಯ ದಿವಸ ಸೂರ್ಯೋ ದಯಕ್ಕೆ ಧೀರೇಂದ್ರಸಿಂಹರ ಕಹಳೆಯ ಗಂಭೀರವಾದ ನಿನಾದವು ವೀರರನ್ನು ಸಮರಕ್ಕೆ ಕರೆಯುವದು. ಆಗ ನಾವೆಲ್ಲರೂ ಸೇನಾಪತಿಗಳ ಧ್ವಜದ ಸುತ್ತಲೂ ನೆರೆದು ಭೂಮಂಡಲವು ಬೆರಗಾಗುವಂತೆ ಸಂಗ್ರಾಮವನ್ನು ಮಾಡಿ ವಿಜಯವನ್ನು ಹೊಂದಿ ಪುಷ್ಕರನ ರಕ್ತದಿಂದ ಭೂದೇವಿಗೆ ಕುಂಕುಮವನ್ನು ಹಚ್ಚಿ ಮತ್ತೆ ಅವಳನ್ನು ನಲಮಹಾರಾಜರ ಸ್ವಾಧೀನ ಮಾಡೋಣಂತೆ!

**ಶತ್ರುಜಿತ್:**—ಮೇಸ್ಸಾ! ಗಂಭೀರಸಿಂಹ!! ಅಂಥ ವೀರನೇ ನೀನು!!! (ತನ್ನ ಖಡ್ಗವನ್ನು ಹಿರಿದು ಮೇಲಕ್ಕೆ ಎತ್ತಿ ಹಿಡಿದು) "ಜಯ ನಲಮಹಾರಾಜ, ಜಯ ನಲಮಹಾರಾಜ" (ಎಂದು ಒಳ್ಳೇ ಸ್ಫೂರ್ತಿಯಿಂದ ಗರ್ಜಿಸುತ್ತಾನೆ.)

**ಗಂಭೀರ:**—(ಸಂತೋಷದಿಂದ ನಕ್ಕು) ಮೆಲ್ಲಗೆ! ಮೆಲ್ಲಗೆ!! ಮಿತ್ರಾ, ನಿನ್ನ ಆರ್ಭಟಿಯ ಜಯಘೋಷವನ್ನು ಕೇಳಿ ಪುಷ್ಕರನು ಮಲಗಿದವನೆದ್ದು ಬಂದುಗಿಂದಾನು!!!

**ಶತ್ರುಜಿತ್:**—ನಾನು ಜಯಘೋಷವನ್ನು ಮಾಡಿದ್ದೇ ತಪ್ಪು! ಅಲ್ಲಿ ನೋಡು, ಅಗಸೆಯ ಕಾವಲುಗಾರನು ಹೇಗೆ ಕಕ್ಕಾವಿಕ್ಕಿಯಾಗಿ ಇತ್ತ ಕಡೆಗೆ ಬರುತ್ತಿರುವನು. ನಡೆ. ಹೋಗೋಣ.

(ಹೋಗುತ್ತಾರೆ)

---

## ಎರಡನೆಯ ಪ್ರವೇಶವು

ಸ್ಥಳ:— (ಶಾರ್ದೂಲಾರಣ್ಯ)

(ರಾಜನೂ ನಿದ್ರಾವಶಳಾದ ದಮಯಂತಿಯೂ)

ರಾಜಾ:—ಈ ಪತಿವ್ರತಾಮಣಿಗೆ ನಿದ್ದೆ ಹತ್ತಿದಂತೆ ಕಾಣುತ್ತದೆ. ಈ ಘೋರಾರಣ್ಯದಲ್ಲಿ ಸಿಂಹ ಶಾರ್ದೂಲಾದಿ ಶ್ವಾಪದಗಳು ಭಯಂಕರವಾಗಿ ಗರ್ಜಿಸುತ್ತಿರಲು ಈ ಕೋಮಲಾಂಗಿಗೆ ಹೇಗೆ ನಿದ್ದೆ ಬಂದಿದ್ದೀತು!

ಧಾಟಿ:—'ಕಾಂತೆ ಫಾರ ತುಲಾ ಮಜ ಸಾಠಿ.'

ಹೀಗೆ ಹೀನದಶಾ-ವಶಳಾಗಿ ಮಲಗಿದಿಯಾ ಕಾಂತೆ ।
ಭೋಗ-ವಿಲಾಸೋಚಿತಳೇ ಭೀಕರ-
ಮಾಗಿಹ ಕಾಂತಾರದಲಿ ಶಾಂತೆ ॥ ಪಲ್ಲ ॥
ಸೇಜದಿ ಪ್ರೇಮಾಲಾಪವನೆನ್ನೊಳ್
ಮಾಡುತೆ ಸೋಂಪಿಲಿ ಮಲಗುವ ನೀರೆ ॥
ರಾಜತನಯೆ ನೀಂ ಧರಣೀತಲದೊಳ್
ಈ ಪರಿ ನಿದ್ರಾವಶಳಾಗುವರೆ ॥ ೧ ॥

ದುರ್ಮತಿಯಾದ ನಲನೆ, ಇದೆಲ್ಲ ನಿನ್ನ ದುಷ್ಕೃತಿಯ ಫಲವಲ್ಲವೆ? (ಆಕಾಶದ ಕಡೆಗೆ ನೋಡಿ) ನನ್ನ ಪ್ರಜೆಗಳೂ ಅಷ್ಟಪ್ರಧಾನರೂ ನನ್ನ ಪಂಚಪ್ರಾಣಳಾದ ಈ ಪ್ರಿಯವಾದಿನಿಯೂ ಪರಿಪರಿಯಾಗಿ ಬೋಧಿಸಿದರೂ ನಾನೇನು ನನ್ನ ದುರ್ವ್ಯಸನವನ್ನು ಬಿಡಲಿಲ್ಲ! ಅದರ ಪರಿಣಾಮ ನೋಡಿರಿ! ನನ್ನ ಪ್ರಜೆಗಳೆಲ್ಲ ಅಸಹ್ಯವಾದ ಕಷ್ಟಗಳನ್ನು ಅನುಭವಿಸುತ್ತಿರುವರು; ನಿಷಧದೇಶದ ವೈಭವವೆಲ್ಲ ಹಾಳಾಗಿಹೋಯಿತು; ಉಜ್ವಲವಾದ ನನ್ನ ಕೀರ್ತಿಯೆಲ್ಲ ಕಪ್ಪುಕಾಡಿಗೆಯಾಯಿತು! ಇಲ್ಲಿ ನೋಡಿರಿ! ನನ್ನ ಗೃಹಲಕ್ಷ್ಮಿಯಾದ ಈ ಸೀಮಂತಿನಿಯು ಯೋಗಿನಿಯ ಅಭದ್ರವಾದ ವೇಷವನ್ನು ತಳೆದು ಹೇಗೆ ದಾರಿದ್ರ್ಯದ ಮೂರ್ತಿಯಂತೆ ಮಲಗಿದ್ದಾಳೆ!! ಧಿಕ್ಕಾರವಿರಲಿ ನನ್ನ ಜನ್ಮಕ್ಕೆ!!! ಯಮರಾಜನು ಶೋಧಿಸಿ ತೆಗೆದ ಎಲ್ಲ ಪ್ರಕಾರದ ಶಿಕ್ಷೆಗಳನ್ನು ಕ್ಷತ್ರಿಯಾಧಮನಾದ ನನ್ನ ಮೇಲೆ ಏಕಕಾಲಕ್ಕೆ ವಿಧಿಸಿದರೂ ಈ ಅನರ್ಥಗಳೆಲ್ಲ ತೊಳೆದುಹೋಗಬಲ್ಲವೆ!!

ಸತ್ಕರ್ಮನಿಷ್ಠನಾದ ನಾನು ಹೀಗೆ ಒಮ್ಮಿಂದೊಮ್ಮೆಲೆ ದುರ್ಮಾರ್ಗಿಯಾದರೂ ಹೇಗಾದೆನು? ಕುಚೇಷ್ಟಿತನಾದ ಕಲಿಯೇ ಕಾರಣನಾಗಿರಬಹು

ದೇನು ? (ತೆರೆಯಲ್ಲಿ ಕಲಿಯು ಖೊಳ್ಳನೆ ನಗುತ್ತಾನೆ) ಯಾರು ನಕ್ಕವರು !!! ಪಾಪಿಯಾದ ಕಲಿಯು ನನ್ನ ಬೆನ್ನುಮೇಲೆಯೇ ಇರುವನೇನು ? ಬಾ ! ದುಷ್ಟಾ, ನಿನ್ನ ಪಾರಿಪತ್ಯವನ್ನು ನಾನು ಮಾಡಿಯೇ ತೀರುವೆನು ! ನಾನಿನ್ನು ಏಕಾಕಿಯಾಗಿ ವನವಾಸದಲ್ಲಿದ್ದು ಕಂದಮೂಲಗಳನ್ನು ತಿಂದು ಘೋರತರವಾದ ತಪಸ್ಸುಮಾಡಿ ಮತ್ತೆ ಭಗವತ್‌ಪ್ರೀತಿಯನ್ನು ಸಂಪಾದಿಸುವೆನು. ಆಮೇಲೆ ಕಲಿಯೆ, ನೀನು ಕೆಳಗಿರುವೆಯೋ ಮೇಲಿರುವಿಯೋ ನೋಡುತ್ತೇನೆ !!!

ಆಯಿತು. ಇದೇ ನಿಶ್ಚಯ ! ಈ ಕ್ಷಣದಿಂದಲೇ ನನ್ನ ತಪಸ್ಸಿಗೆ ಪ್ರಾರಂಭವಾಗತಕ್ಕದ್ದು. ಇನ್ನು ಹಂಬಲವೇಕೆ ? ನನ್ನ ಪ್ರಾಣಕ್ಕಿಂತಲೂ ಪ್ರಿಯಳಾಗಿರುವ ಈ ಸುಕುಮಾರಿಯನ್ನು ತ್ಯಾಗಮಾಡುವದು ಮೊದಲನೆಯ ಕೆಲಸ. ಮನಸ್ಸೇ, ನೀನು ಅಡ್ಡಾಗಿ ಬರಬೇಡ !! ನೋಡು ನಾನು ಇವಳನ್ನು ಬಿಟ್ಟು ನಡೆದನು ! (ದೂರ ಹೋಗಿ) ಈ ಸುಶಿಕ್ಷಿತಳು ಹೇಗಾದರೂ ಮಾಡಿ ಕುಂಡಿನಪುರಕ್ಕೆ ಹೋಗಬಲ್ಲಳು. ಇವಳ ಜಾಜ್ವಲವಾದ ಪಾತಿವ್ರತ್ಯದ ಪ್ರಭಾವವೇ ಇವಳನ್ನು ಮಾರ್ಗದಲ್ಲಿ ರಕ್ಷಿಸುವದು. ಹೇ ! ಲೋಕಧಾತ್ರಿಯಾದ ಭೂಮಾತೆಯೇ! ಅಷ್ಟದಿಕ್ಪಾಲಕರೆ! ನಿದ್ರಾವಶಳಾಗಿರುವ ಈ ಅಬಲೆಯನ್ನು ನೀವು ಕಾಪಾಡಿರಿ ಕಂಡಿರಾ....! (ಎಂದು ಹೊರಟುಹೋಗುತ್ತಾನೆ)

**ದಮಯಂತಿ:**— (ಕನಸಿನಲ್ಲಿ) ಪ್ರಾಣನಾಥರೆ ! ನಿಮ್ಮನ್ನು ಅಗಲಿ ನಾನು ಅರಗಳಿಗೆಯಾದರೂ ಇರೆನು. ನನ್ನ ತಂದೆಯ ಊರಿಗಂತೂ ನಾನು ಹೋಗುವವಳಲ್ಲ. ಆ ಮಾತೇ ನೀವು ತಗೆಯಬೇಡಿರಿ ! ಅವ್ವಯ್ಯಾ ! ಅಲ್ಲಿ ನೋಡಿರಿ, ಎಂಥ ಘಟಸರ್ಪ ಕೂತಿದೆ !! ಆರ್ಯಪುತ್ರರೆ ತಡೆಯಿರಿ ! ಅತ್ತ ಹೋಗಬೇಡಿರಿ !! ಹಾಂ ! ಹಾಂ ! ನನ್ನ ಜೀವಿತೇಶ್ವರರೇ, ಮುಂದೆ ಹೋಗಬೇಡಿರಿ ! (ಎಂದು ಎಚ್ಚತ್ತು ಕಾತರಳಾಗಿ ಎದ್ದು ಕೂಡುತ್ತಾಳೆ)

ಪ್ರಾಣಕಾಂತರೆಲ್ಲಿ !!! (ಅತ್ತಿತ್ತ ನೋಡಿ) ಇಲ್ಲಿ ಕಾಣುವದಿಲ್ಲ. ಆರ್ಯಪುತ್ರರೆ ಎಲ್ಲಿರುವಿರಿ ? ಪ್ರತ್ಯುತ್ತರವೆ ಇಲ್ಲ ! ಅವ್ವಯ್ಯಾ ! ಎಲ್ಲಿಗೆ ಹೋಗಿದ್ದಾರು ? ಪ್ರಿಯಾ! ನನ್ನನ್ನು ಅಂಜಿಸಬೇಕೆಂದು ಅಡಗಿಕೊಂಡಿರುವಿರೇನು ? ಮೊದಲೇ ನಾನು ಭೀರುವು. ಈ ಕಟ್ಟಡವಿಯಲ್ಲಿ ರಾತ್ರಿಯ ಕಾಲಕ್ಕೆ ನೀವು ಹೀಗೆ ವಿನೋದ ಮಾಡುವಿರಾ ? (ಕಿವಿಗೊಟ್ಟು ಕೇಳಿ) ಸುಳುವೇ ಇಲ್ಲ !

ಆರ್ಯಪುತ್ರರೆ ! ಆರ್ಯಪುತ್ರರೆ !! (ಥಕ್ಕನೆ ಎದೆಬಡುಕೊಂಡು) ಅಪ್ಪಾ ! ನಾನಿನ್ನು ಹೇಗೆ ಮಾಡಲಿ !! ಈ ದಟ್ಟಡವಿಯಲಿ ನಾಯಿನರಿಗಳು ಕೂಡ ಅಡ್ಡಾಡಲಾರವು. ಮೇಲೆ ಇಂಥ ಕಗ್ಗತ್ತಲೆ ! ಪ್ರಾಣನಾಥರು ಬೇಕೆಂದು ನನ್ನನ್ನು ತೊಲಗಿ ಹೋದರೇನು ?

ಧಾಟಿ:–' ಇನ್ನೇನು ಗತಿಯು ಬಾಲೆ, ಗಾಯನ ಲೋಲೆ । '

ಎನ್ನಾ ತ್ಯಜಿಸಿ ಪೋದಿಯಾ ! ಕಾನನದೊಳು । ಎನ್ನಾ...॥ ॥ ಪ ॥
ಪರಿವಾರದೊಂದಿಗೆ ನಾನರಮನೆಯೊಳು ।
ಇರುವಾಗ ನೀನುಪ–ಚರಿಸಿದ ಪತಿರಾಯಾ ॥ ೧ ॥
ವಲ್ಲಿಯು ತರುವರ–ನಾಶ್ರಯಿಸಿರುವಂತೆ ।
ನಲ್ಲಾ ನಿನ್ನನು ನಾನು ನಂಬಿ ನಿದ್ರೆಯೊಳಿರೆ ॥ ೨ ॥

ಪರಿಚಾರಕರ ಪಾಲುಗಾರಿಕೆಯಿಲ್ಲದೆ ನಾನೊರ್ವಳೇ ಪತಿದೇವರ ಸೇವೆಯನ್ನು ಮಾಡತಕ್ಕವಳೆಂದು ನಂಬಿ ನಾನು ಈ ವನವಾಸವನ್ನೇ ಹಾರೈಸಿದೆನಲ್ಲವೆ ? ಪ್ರಿಯಾ! ನನ್ನಿಂದೇನು ತಪ್ಪಾಯಿತೆಂದು ನೀವು ನನ್ನನ್ನು ಹೀಗೆ ಬಿಟ್ಟುಹೋದಿರಿ ? ಪಾಪಿಣಿ ದಮಯಂತೀ, ನಿನಗೆಲ್ಲಿಯ ಕಾಳನಿದ್ರೆ ಪ್ರಾಪ್ತವಾಯಿತು ! ನಾನು ಜಾಗರೂಕಳಾಗಿದ್ದರೆ ನನ್ನ ಪ್ರಾಣಪದಕವನ್ನು ಹೀಗೆ ಎಂದಿಗೂ ಕಳಕೊಳ್ಳುತ್ತಿದ್ದಿಲ್ಲ !

ಅಯ್ಯೋ ! ನಾನಿನ್ನೇನು ಗತಿ ಮಾಡಲಿ ! ಆಗಲೆ ನನಗೆಂಥಾ ಕೆಟ್ಟ ಕನಸು ಬಿದ್ದಿತ್ತು !! ಕುಕಲ್ಪನೆಗಳೇ, ನೀವು ನಿಮ್ಮ ಘೋರತರವಾದ ಸ್ವರೂಪವನ್ನು ನನಗೆ ಸರ್ವಥಾ ತೋರಿಸಬೇಡಿರಿ ! ಭಗವಂತನಾದ ನಾರಾಯಣನು ನನ್ನ ಮಾಂಗಲ್ಯವನ್ನು ನಿಶ್ಚಯವಾಗಿ ರಕ್ಷಿಸುವನೆಂದು ನಾನು ನಂಬಿದ್ದೇನೆ.

ಧಾಟಿ:—' ಗತಿಯೇನು ಮುಂದಕೆ. '

ಕರುಣಾಂಬುಧೆ ರಮಾ–ವರ ನಾನು ಕೋರುವೆ ॥
ಚಿರಕಾಲ ಕಾಂತನು ಧರೆಯೊಳು ಬಾಳಲಿ ॥ ಪಲ್ಲಾ ॥
ಸತಿ ನಾನು ಸೇಮುದಿ ಪತಿಸೇವೆ ಮಾಡಿದ ॥
ಸುಕೃತ ಪುಣ್ಯರಾಶಿಯು ಹಿತದಿಂದೆ ಕಾಯ್ದಿಹೆ ॥ ೧ ॥
ಹರಿ ನಾನದೆಲ್ಲವುಂ ಸುರಿವಶ್ರುಜಾಲದಿ ॥
ಎರೆದೀವೆ ಧಾರೆಯು ಧೊರೆ ನಿನ್ನ ಪಾದಕೆ ॥ ೨ ॥

(ತೆರೆ)

## ಮೂರನೆಯ ಪ್ರವೇಶವು

ಸ್ಥಳ:—ಶಾರ್ದೂಲಾರಣ್ಯದಲ್ಲಿ ಪುಲಿಂದನ ಗುಡಿಸಲವು

(ಪುಲಿಂದನೂ ಅವನ ಹೆಂಡತಿಯೂ)

**ಪುಲಿಂದ:**—ಎಲೇ, ಈ ಸರಿರಾತ್ರಿಯಲ್ಲಿ ನಮ್ಮ ಗುಡಿಸಿಲದ ಮುಂದೆ ಹಾಡುತ್ತಿರುವವರು ಯಾರು ನೋಡು !

**ಹೆಂಡತಿ:**— ನೀನು ಹೋಗಿ ನೋಡಬಾರದೆ ಗಂಡಸಾದವನು ! ಕತ್ತಲೆಯ ರಾತ್ರಿಯಲ್ಲಿ ಇಂಥಾ ಅಡವಿಗೆ ಮನುಷ್ಯನು ಬರುವದುಂಟೆ ? ಕೇಳಿದರೆ ಹೆಣ್ಣುಸ್ವರ ! ಜಕ್ಕಿಣಿ-ಗಿಕ್ಕಿಣಿ ಇದ್ದಾಳು. ನಾನೊಲ್ಲೆ

**ಪುಲಿಂದ:**—ಜಕ್ಕಿಣಿಯನ್ನು ನಿಮ್ಮಪ್ಪನಾದರೂ ನೋಡಿದ್ದಾನೇನು ? ದಾರಿಕಾರತಿ ಇರಬಹುದು. ನೋಡು ! ಏನು ಸಾಯುವದಿಲ್ಲ.

**ಹೆಂಡತಿ:**—ನಾನು ಸತ್ತರೆ ಎರಡೂ ಕೈಲೆ ಉಣ್ಣುವಿ !! ಬಂಗಿಸೊಪ್ಪು ಸೇದಿ ತನನನನ ಹಾಡಿದ ಹಾಗಲ್ಲ, ಹೋಗಿ ನೋಡಬಾರದೆ ?

**ಪುಲಿಂದ:**—ನಿನ್ನಂಥ ಎಟ್ಟೆ ಹೆಂಗಸನ್ನು ನಾನು ನೋಡಲೇ ಇಲ್ಲ! (ಎದ್ದು ಬಾಗಿಲ ತೆರೆದು ದಮಯಂತಿಯನ್ನು ನೋಡಿ) ಅಲಲಲ !!! ಯಾರಿವಳು ? ನೋಡಿದರೆ ಕಣ್ಣೇ ಕುಕ್ಕುತ್ತವೆ.

ಲಾವಣೀ : ಧಾಟಿ:—'ಮಾತು ಕೇಳು ಕಾಂತೀ.'

ಯಾರೊ ಇವಳು ರಂಬೀ, ಇಂಥಾ ಚಿತ್ರದಾಗಿನ ಗೊಂಬೀ ॥
ದೇವಲೋಕದ ರಂಬೀ, ನೋಡಿದೆ ನಾನು ಕಣ್ಣುತುಂಬೀ ॥ ಪ ॥
ಮುಗಿಲ ಮೇಲೆ ಸುಳಿದೂ, ಭೂಮಿಗೆ ಬಂದಳೇಕಿ ಇಳಿದೂ ॥
ಜಗ್ಗಜಗ್ಗನೇ ಹೊಳೆದೂ, ಚಂದ್ರನ ಬೆಳಕು ತಾನು ಹಳಿದೂ ॥
(ಸಾಗು) ಕಡಕ್ ಮಾಡಿ ಕೋಲ್ಮಿಂಚು ಹೊಡೆದು ಕಂಡಂತೆ,
ಚಿಕ್ಕೆ ಬಿದ್ದಂತೆ ॥
ಬಿಡದೆ ಚಂದರ ಜೋತಿ ತಂದು ಕಣ್ಣಿಗೆ ಹಿಡದಂತೆ,
ವಜ್ಜರ ಹೊಳೆದಂತೆ ॥
ಮಾನೀನಿ ಕಾಮಿನಿ ಬಂದವಳೂ ಯಾರಿವಳೂ ॥
ಬಣ್ಣನೋಡಿ ನಿಂಬೀ ಹಣ್ಣಿಗೆ ಬಂತು ಚಿಂತಿ ತುಂಬೀ ॥
ದೇವಲೋಕದ ರಂಬೀ, ನೋಡಿದೆ ನಾನು ಕಣ್ಣುತುಂಬೀ ॥೧॥

ಇಂಥಾSSSಚಲುವೆ ! ಮೇಲೆ ಹರೆಯುದಾಕೆ !! ಸೋಗು ನೋಡಿದ್ಯಾ ಜೋಗತೀದು !!! ಸೂಳೆ ಮುಪ್ಪಾಗಿ ಜೋಗತಿ ಆಗುತ್ತಾಳೆಂದು ಹಿರಿಕಿರಿಯರು ಹೇಳುತ್ತಾರೆ. ಈಕೆ ಜೋಗತಿ ಯಾಕೆ ಆಗಿದ್ದಾಳು!!! (ಆಡ್ಡಾಡುತ್ತಾನೆ)

**ದಮಯಂತಿ:**—(ತನ್ನಷ್ಟಕ್ಕೆ) ಈ ಮನುಷ್ಯನು ಡಪ್ಪು ಬಾರಿಸುತ್ತ ಹಾಡುತ್ತಿರುವ ಸಪ್ಪಳ ಕೇಳಿ ನನ್ನ ಪ್ರಾಣನಾಥರು ಇಲ್ಲಿಗೆ ಬಂದಿರಬಹುದೆಂಬ ಆಶೆಯಿಂದ ನಾನಿಲ್ಲಿಗೆ ಧಾವಿಸಿ ಬಂದೆನು. (ಪುಲಿಂದನನ್ನು ಕಂಡು ಬೆದರಿ ಹಿಂದಕ್ಕೆ ಸರಿದು) ಈ ವಿಚಿತ್ರ ವೇಷಧಾರಿಯಾದ ಪುಲಿಂದನಿಂದ ನನಗೆ ಬಾಧೆಯಾಗಲಿಕ್ಕಿಲ್ಲವಷ್ಟೆ ?

**ಪುಲಿಂದ:**—ಜೋಗತೆಮ್ಮಾ ಅಂಜಬೇಡ ! ಎಲ್ಲಿಂದ ಬಂದಿ ನೀನು ? ಇಷ್ಟು ರಾತ್ರಿಯಲ್ಲಿ ಇಲ್ಲಿಗೆ ನೀನು ಹೇಗೆ ಬಂದೆಮ್ಮಾ ?

**ದಮಯಂತಿ:**— (ಕಿಂಚಿತ್ ಧೈರ್ಯವನ್ನು ತಾಳಿ) ಅಪ್ಪಾ, ನಾನೂ ನನ್ನ ಪತಿಯೂ ಕೂಡಿ ಯಾತ್ರೆಗೆ ಹೊರಟಿದ್ದೆವು. ಇದೇ ಸಾಯಂಕಾಲಕ್ಕೆ ಆ ಹಳ್ಳದ ದಂಡೆಯ ಮೇಲೆ ಇಳುಕೊಂಡೆವು. ಪತಿಯು ಹಣ್ಣುಹಂಪಲ ತರುವದಕ್ಕಾಗಿ ಹೋದವರು ಹಾದಿ ತಪ್ಪಿದರೋ ಏನೋ ತಿಳಿಯಲಿಲ್ಲ. ಅವರು ಇಲ್ಲಿಗೆ ಬಂದಿರುವರೆಂದು ನಂಬಿ ನಾನಿಲ್ಲಿಗೆ ಬಂದೆನು.

**ಹೆಂಡತಿ:**—ಅಯ್ಯೋ ಪಾಪವೆ ! ನಿನ್ನ ಗಂಡನು ಇಲ್ಲಿಗೆ ಬಂದಿಲ್ಲಮ್ಮಾ.

**ದಮಯಂತಿ:**— ದೈವವೇ, ಹೇಗೆ ಮಾಡಲಿ ? (ಎಂದು ದುಃಖಿಸಿ ಅಳುತ್ತಾಳೆ.)

**ಪುಲಿಂದ:**—ಅಮ್ಮಾ, ದುಃಖಿಸಬೇಡ. ಈ ರಾತ್ರಿ ಇಲ್ಲಿಯೇ ಇರು. ನಾಳೆ ಬೆಳಗ್ಗೆ ನಾನು ನಿನ್ನ ಗಂಡನನ್ನು ಹುಡುಕಿ ತಂದುಕೊಡುತ್ತೇನೆ, ಚಿಂತೆ ಮಾಡಬೇಡ !

**ಹೆಂಡತಿ:**— ಜೋಗತೆಮ್ಮಾ, ಒಳಗೆ ಬಾ ನಮ್ಮವ್ವಾ ! ಚಳಿಯಲ್ಲಿ ಕಟಕಟ ನಡುಗುತ್ತಿರುವಿ. ಅಂಜಬೇಡ. ಈ ನನ್ನ ಗಂಡ ಉತ್ತಮನು.

**ಪುಲಿಂದ:**—ಈ ನನ್ನ ಹೆಂಡತಿಯು ಕಣ್ಣಿಗೆ ರಕ್ಕಸಿಯಂತೆ ಕಂಡರೂ ಇವಳ ಮನಸ್ಸು ಬಲು ಒಳ್ಳೇದು !!

**ದಮಯಂತಿ:**—ದೇವರು ನಿಮಗೆ ಕಲ್ಯಾಣ ಮಾಡಲಿ!

(ಮೂವರೂ ಗುಡಿಸಿಲಿನಲ್ಲಿ ಪ್ರವೇಶ ಮಾಡುತ್ತಾರೆ.)

**ಹೆಂಡತಿ:**—ಜೋಗತೆವ್ವಾ, ಈ ಹುಲಿಚರ್ಮ ಹಾಸಿಕೋ, ಈ ಗೊಂಗಡೀ ಹೊದ್ದುಕೋ!

**ಪುಲಿಂದ:**—ಜೋಗತೆವ್ವಾ, ನೀನಿಷ್ಟು ಚೆಲುವೆಯೂ ಚಿಕ್ಕವಳೂ ಆಗಿದ್ದು ಒಬ್ಬ ಅರಸಗಿರಸನ ಹೆಂಡತಿ ಆಗಬಾರದೆ! ಇದರಲ್ಲಿ ಏನು ಬಳಲುಕೊಳ್ಳುತ್ತೀ?

**ದಮಯಂತಿ:**—(ಉಸುರ್ಗರೆದು) ಅಪ್ಪಾ, ಅರಸನ ಹೆಂಡತಿಗಾದರೂ ಸ್ಥಿರವಾದ ಸೌಖ್ಯವಿರುವದು ನಿಜವಾದ ಮಾತಲ್ಲ!

**ಹೆಂಡತಿ:**—ಹೌದು ನಮ್ಮಪ್ಪಾ! ನಮ್ಮ ನಳರಾಯನಂಥ ಮಾರಾಯನೇ ಅರಸೊತಿಗೆ ಕಳಕೊಂಡು ಅಡವೀಪಾಲಾದನಂತೆ! ಉಳಿದವರ ಪಾಡೇನು? ಅವ್ವಾ! ಎಂಥ ಅರಸನೆSSSSS ನಮ್ಮ ನಳರಾಯಾ! ಅರಸಿ ನೋಡು, ಗೌರವ್ವ ಬೇರೆ ಅಲ್ಲಾ; ಆಕಿ ಬೇರೆ ಅಲ್ಲಾ!! ಬೆತ್ತದ ಹಾಂಗೆ ಬಳುಕುವ ನಮ್ಮ ತಾಯಿ ವನವಾಸದಲ್ಲಿ ಹ್ಯಾಂಗೆ ಇದ್ದಾಳು ದೇವರೆ!!! (ಎಂದು ಕಣ್ಣೊರಿಸಿಕೊಳ್ಳುತ್ತಾಳೆ).

**ಪುಲಿಂದ:**—ಅರಸ ಅನಬೇಕು ನಮ್ಮ ನಳರಾಯನೊಬ್ಬನೇ ಅರಸು. ಕಾಳಗಾ ಮಾಡಲಿಕ್ಕೂ ಹಾಂಗೆ! ಬ್ಯಾಟಿಗೂ ಹಾಂಗೇ! ಕುಸ್ತಿಗೂ ಹಾಂಗೇ! ದೇವರೇ ಆತ! ಮತ್ತೆ ಕೈ ಎಂಥಾ ದೊಡ್ಡದು!!! ಹುಲೀಬ್ಯಾಟೀ ಮಾಡಿಕೊಂಡು ಬಂದ ಹುಡುಗರಿಗೆ ಬಂಗಾರದ ರಟ್ಟೀಬಳಿ ಕೊಟ್ಟನೇ! (ಎಂದು ತೋಳೇರಿಸಿ ತನ್ನ ರಟ್ಟೀಬಳಿ ತೋರಿಸುತ್ತಾನೆ)

**ಹೆಂಡತಿ:**—ಬಡಬಗ್ಗರ ಮೇಲಂತೂ ಗಂಡಹೆಂಡರು ಬಲು ಜೀವ!

**ಪುಲಿಂದ:**—ನಮ್ಮ ದೈವ ಕಡಿಮೆ! ಅವರೇನು ಮಾಡ್ಯಾರು?

**ದಮಯಂತಿ:**—(ತನ್ನೊಳಕ್ಕೆ) ಇಂಥ ವನಚರರೇ ಇಷ್ಟು ಹಳಹಳಿಸುತ್ತಿರಲು ಪ್ರತ್ಯಕ್ಷ ಆ ಮಹಾರಾಯನ ಹೆಂಡತಿಯಾದ ನನಗೆಷ್ಟು ವ್ಯಸನವಾಗಬೇಡ? ಭಕ್ತಜನವತ್ಸಲಾ ಜಗದೀಶಾ,

ಧಾಟಿ:—' ಈಶ ಚಿಂತಾ ನಿವಾರಿಲ ಸಾರಿ. '

ನೀನೆ ಸರ್ವೇಶನೆ ಕಾಯಬೇಕೈ ।
ಕಾನನದಿ ಕಾಂತನಂ ; ಕೋರಿಕೆಯನಾಲಿಸೈ ॥ ಪಲ್ಲ ॥
ಹಿಂದೆ ಪ್ರಹ್ಲಾದನಂ ನೀನೆ ಕಾಯ್ದು ॥
ಬಂದೆ ಕರಿರಾಜನಾ ಮೊರೆಯ ಕೇಳಿ ॥
ಇಂದಿರಾನಾಥನೆ ನಾವು ಕೂಡಾ ॥
ಹೊಂದಿದವರೈ ಪ್ರಭೊ ನಿನ್ನ ಪದ ಸೇವೆಯಾ ॥ ೧ ॥

(ತೆರೆ)

---

## ನಾಲ್ಕನೆಯ ಪ್ರವೇಶವು

ಸ್ಥಳ:—ಅರಣ್ಯ. (ರಾಜನೂ ನಾರದರೂ)

ಧಾಟಿ:—' ಆಜನಂದಲಾಲ '

ಅಥವಾ

' ಹೋಯ ಸಂಸಾರ ತರುಮುಗ್ಧ ಕೋರಕ ಭುವನಿ '

**ರಾಜಾ:—**

ಪ್ರೇಮಮಯಳಾದ ಮನಮೋಹನಾಂಗಿಯನು ನಾಂ ।
ತಾಮಸನು ತ್ಯಾಗ ಮಾಡಿದೆ ಕಾನನಾಂತರದಿ ॥ ಪಲ್ಲ ॥
ಭೀರು ನೀಂ ರಜನಿಯಲಿ ದಾರಿಗಾಣದೆ ಮರುಗಿ ।
ದೂರಿ ಬಾಯಾರಿದೇಂ ದುರುಳ ನಾಂ ಜೀವಿಸಲು ॥ ೧ ॥

ಹಾ ! ಪ್ರಿಯೆ, ಪತಿಸೇವಾಪರಾಯಣೆ, ದಮಯಂತೀ, ಕೃತಘ್ನನೂ ವಿಶ್ವಾಸಘಾತಕನೂ ಕರ್ತವ್ಯಪರಾಙ್ಮುಖನೂ ಆದ ಈ ನಳನನ್ನು ನಂಬಿ ನೀನು ನಿಶ್ಚಿಂತಳಾಗಿ ಮಲಗಿಕೊಂಡು ನಿದ್ದೆ ಮಾಡುತ್ತಿದ್ದಿಯಲ್ಲವೆ! ದಾರತ್ಯಾಗಿಯಾದ ನಾನು ಮಹಾಪಾತಕಿಯೇ ! ಮಂಗಲೆ, ಪತಿಯ ಗತಿಯೇನಾಯಿತೋ ಎಂದು ನೀನು ಚಿಂತಿಸುತ್ತಿರುವಿಯೋ ಹೊರತಾಗಿ ನಾನು ಮಾಡಿದ ವಂಚನೆಯ ಕಲ್ಪನೆಯು ಕೂಡ ನಿನ್ನ ನಿರ್ಮಲವಾದ ಮನಸ್ಸಿನಲ್ಲಿ ಹುಟ್ಟಿರಲಿಕ್ಕಿಲ್ಲ ! ಇಂದ್ರಾದಿ ದೇವತೆಗಳನ್ನು ಬಿಟ್ಟು ನನ್ನನ್ನು ವರಿಸಿದ ಪ್ರಾಣಪ್ರಿಯೆ, ನಾನು ನಿನ್ನನ್ನಗಲಿ ಜೀವಿಸಬಹುದೆ ! ದೇವಿ, ಕ್ಷಮಿಸು ! ನಾನು ನಿನ್ನನ್ನು ಅರಿಸುತ್ತ ಬಂದು ನಿರಂತರವಾಗಿ ನಿನ್ನ ಪಾದಸೇವೆಯನ್ನು ಮಾಡಿಕೊಂಡಿರುವೆನು ! (ಅಡ್ಡಾಡಿ ವಿಚಾರಿಸಿ) ಹಾಂ ! ಮತ್ತೆ ಮೋಹ ಬಂದಿತು ನೋಡಿರಿ ! ನಾನು ತಪಸ್ಸು ಮಾಡತಕ್ಕವನಲ್ಲೆ ? (ಮತ್ತೆ ಅಡ್ಡಾಡಿ)

ಮನೋನಿಗ್ರಹವೆಂದರೆ ಅದೇನು ಹಾದಿಯ ಮೇಲೆ ಬಿದ್ದಿರುವ ವಸ್ತುವೆ? ನಾವು ಕ್ಷತ್ರಿಯರು, ಈ ದೇಹವನ್ನು ತೃಣಕ್ಕೂ ಕಡಿಮೆ ಮಾಡಿ ಇದನ್ನು ಯುದ್ಧದಲ್ಲಿ ರಣದೇವತೆಗೆ ಬಲಿಯಾಗಿ ಕೊಡುತ್ತೇವೆ. ಆದರೆ ಇದೇ ದೇಹದಲ್ಲಿದ್ದ ಮನಸ್ಸಿನ ಮೇಲೆ ನಮ್ಮ ಅಧಿಕಾರವು ತಿಲಮಾತ್ರವೂ ಇರಬಾರದೆ ? ಮನೋನಿಗ್ರಹದ ಶಕ್ತಿಗಾಗಿಯೇ ಬ್ರಾಹ್ಮಣರು ನಮಗಿಂತಲೂ ಶ್ರೇಷ್ಠರಾದರು. ತಪಸ್ಸಿನಿಂದಲೇ ಬ್ರಾಹ್ಮಣರು ಸಂಯಮಿಗಳಾದರಷ್ಟೆ ! ತಪಸ್ಸಿನಿಂದ ನನಗಾದರೂ ಆ ಶಕ್ತಿಯು ಬರಲಾರದೇನು ?

ಓಹೋ! ಏನೋ ನನ್ನ ಕಾಲಿಗೆ ಕಚ್ಚಿತು!! (ನಿರೀಕ್ಷಿಸಿ) ಹಾವೇ ನೋಡಿರಿ! ಕ್ರೋಧಾವಿಷ್ಟಳಾದ ಮೃತ್ಯುದೇವತೆಯ ಹೆಣಿಲಿನಂತೆ ಭಯಂಕರ ವಾಗಿ ಕಾಣುವ ಕೃಷ್ಣಸರ್ಪವು ನನ್ನನ್ನು ಕಚ್ಚಿ ಓಡಿಹೋಗುತ್ತಲಿದೆ! ನಲರಾಜಾ, ನಿನ್ನ ಕೀರ್ತಿಗೆ ತಗಲಿದ ಕಲಂಕವನ್ನು ತೊಳೆಯದೆ ಮುಂದಿನವರ ಮಾನಭಂಗಕ್ಕಾಗಿ ಅದನ್ನು ಹಾಗೆಯೇ ಬಿಟ್ಟು ನಡೆದಿಯಲ್ಲವೆ? ಉಪಾಯ ವಿಲ್ಲ!! (ಕುಳಿತುಕೊಳ್ಳುತ್ತಾನೆ)

ಇನ್ನೇನಿದೆ?! ಮೈತುಂಬ ವಿಷವು ಭೇದಿಸಲಾರಂಭಿಸಿತು. ಕ್ಷಣ ಕ್ಷಣಕ್ಕೆ ಬಲವು ಶಿಥಿಲವಾಗುತ್ತ ಬಂದಿತು. ವಿಶ್ವಸ್ಥಿತಿಲಯಕರ್ತಾ ಭಗವಂತಾ, ಈ ನರಾಧಮನು ಮಾಡಿದ ತಪ್ಪುಗಳನ್ನು ಕ್ಷಮಿಸಿ ಇವನನ್ನು ನಿನ್ನ ಸಾನ್ನಿಧ್ಯಕ್ಕೆ ಕರೆದುಕೋ. (ಎಂದು ನಿಶ್ಚೇತನನಾಗಿ ಒರಗುತ್ತಾನೆ.)

(ಅಷ್ಟರಲ್ಲಿ ನಾರದರು ಪ್ರವೇಶಿಸುತ್ತಾರೆ)

ಧಾಟಿ:—'ಮಾಯಿ ಸರಸತಿ ಶಾರದಾ'

**ನಾರದ:—**

ಎಂತು ಪೊಗಳಲಿ ಮಾಧವಾ।
ಚಿಂತಾಹೀನನಾದೆಂತೊ, ಲೋಕಹಿತವಾ॥
ಚಿಂತಿಸುವಿಯ್ಯೊ ನೀನಾವಗಂ ದೇವಾ॥ ಪಲ್ಲ॥
ದೇವಾಧಿದೇವಾ, ನೀಂ ಭಕುತರ ಪೊರೆಯು।
ಕಿವಿ ಕೇಳುತೆ ಬರುವಿ ಪ್ರಭೋ॥
ಶ್ರೀವಿಲಾಸಗಳನು ನೂಕಿ ದಯಾಸಿಂಧು॥ ೧॥

ಕರ್ಕೋಟಕನು ನಲರಾಜನನ್ನು ಕಚ್ಚಿ ಓಡಿಹೋಗುತ್ತಿದ್ದನು. ನಾನೇ ಆ ನಾಗರಾಜನನ್ನು ಕರೆದು ನಿನ್ನ ವಿಷವನ್ನು ನೀನು ಮರಳಿ ತೆಗೆದುಕೋ ಎಂದು ಆಜ್ಞಾಪಿಸಿದೆನು. ನಾನು ಈ ಸಮಯಕ್ಕೆ ಬಂದೆನಂತೇ ಒಳಿತಾಯಿತ! ಇಲ್ಲದಿದ್ದರೆ ಕೆಲಸವು ಕೆಟ್ಟೇಹೋಗುತ್ತಿತ್ತು!! ಇನ್ನೇನು ನಲರಾಜನ ಜೀವಕ್ಕೆ ಭಯವಿಲ್ಲ. (ರಾಜನ ಸಮೀಪಕ್ಕೆ ಬಂದು ಅವನ ತಲೆಯ ಮೇಲೆ ಕೈಯಿಟ್ಟು) ನಲರಾಜ, ಏಳು! ಏಳು!!

**ರಾಜಾ:—**(ಕಣ್ಣು ತೆರೆದು ನೋಡಿ) ಓಹೋ! ಏನು ಪುಣ್ಯವಿದು! ಪ್ರತ್ಯಕ್ಷ ನಾರದ ಮುನೀಶ್ವರರನ್ನೇ ಕಂಡೆನಲ್ಲ! ಭಗವನ್, ಇಲ್ಲಿಂದಲೇ

ವಂದಿಸುತ್ತೇನೆ; ಕ್ಷಮಿಸಬೇಕು. ಎದ್ದುಬಂದು ತಮ್ಮ ಪಾದಸ್ಪರ್ಶದ ಲಾಭ ವನ್ನು ಹೊಂದುವಂಥ ಭಾಗ್ಯವು ನನ್ನದಿಲ್ಲ. ಸರ್ಪದಂಶದಿಂದ ನಾನು ನಿಶ್ಚೇಷ್ಟಿತನಾಗಿರುತ್ತೇನೆ. ಪೂರ್ವಜನ್ಮದ ಸುಕೃತದಿಂದಲೇ ಮರಣ ಸಮಯದಲ್ಲಿ ನಾನು ಪರಮಪವಿತ್ರವಾದ ತಮ್ಮ ಪಾದಾರವಿಂದವನ್ನು ಕಂಡೆನು. ಪಾದ ಸ್ಪರ್ಶವನ್ನು ಕೊಟ್ಟು ನನಗಿನ್ನು ಮೋಕ್ಷವಾಗಲೆಂದು ಮುನೀಶ್ವರರು ಆಶೀರ್ವದಿಸಬೇಕು!

**ನಾರದ:**—(ತನ್ನಷ್ಟಕ್ಕೆ) ಈ ಮಹಾತ್ಮನ ಯೋಗ್ಯತೆಯನ್ನು ನೋಡಿದಿರಾ! ಇಂಥ ಸಮಯದಲ್ಲಿ ಐಹಿಕವಾದ ವಿಚಾರಗಳನ್ನು ತಿಲಮಾತ್ರವಾದರೂ ಲೆಕ್ಕಿಸದಿರುವ ಈ ಉದಾರಚರಿತನು ರಾಜರ್ಷಿಯೇ ಅಲ್ಲವೆ? ಮತ್ತೊಬ್ಬನಾಗಿದ್ದರೆ? ನನ್ನನ್ನು ಕಂಡು ಬದುಕಿಸಿಕೊಳ್ಳಿರೆಂದು ಬೇಡಿಕೊಳ್ಳುತ್ತಿದ್ದನು. ಈ ಧೀರನು ಮೋಕ್ಷವನ್ನೇ ಕೇಳಿಕೊಂಡನಷ್ಟೆ! ಸಾಧು! ನಲರಾಜಾ, ಸಾಧು! ನೀನೇ ಧನ್ಯನು! (ರಾಜನನ್ನು ಕುರಿತು) ರಾಜಾ! ಏಳು, ಏಳು! ನನ್ನ ಆಜ್ಞೆಯ ಮೇರಿಗೆ ನಾಗರಾಜನು ತನ್ನ ವಿಷವನ್ನು ಮರಳಿ ತೆಗೆದುಕೊಂಡಿದ್ದಾನೆ. ನಿನಗಿನ್ನು ಮರಣದ ಭೀತಿಯಿಲ್ಲ. ಮೋಕ್ಷದ ಮಾತು ಈಗೇಕೆ? ಅದು ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗಿಲ್ಲ.

**ರಾಜಾ:**— (ಎದ್ದು ನಾರದರ ಕಾಲ್ಗೆರಗಿ) ಕೃಪಾನಿಧಿಗಳೇ, ಈ ದಾಸನ ಮೇಲೆ ತಮ್ಮ ಉಪಕಾರವು ಬಹಳವಾಯಿತು. ಖಳನಾದ ಕಲಿಯು ನನ್ನನ್ನು ಬಹುಪರಿಯಾಗಿ ಛಲಿಸಿದನು. ನಾನಿನ್ನು ಉಗ್ರವಾದ ತಪಶ್ಚರ್ಯೆಯನ್ನು ಮಾಡಿ ಆ ದುರಾತ್ಮನನ್ನು ನಿಗ್ರಹಿಸಬೇಕೆಂಬ ಸಂಕಲ್ಪವನ್ನು ತೊಟ್ಟಿದ್ದೇನೆ. ನನ್ನ ಸಂಕಲ್ಪವು ಕೊನೆಗಾಣುವಂತೆ ತಾಪಸೋತ್ತಮರು ನನಗೆ ಮಾರ್ಗವನ್ನು ತೋರಿಸಿಕೊಡಬೇಕು!

**ನಾರದ:**—ನಲರಾಜ, ನಿನ್ನಲ್ಲಿ ಅಪರಿಮಿತವಾದ ಪುಣ್ಯಸಂಚಯವಿರುವದು. ಉಗ್ರವಾದ ತಪಶ್ಚರ್ಯೆಯನ್ನು ಮಾಡುವ ಕಾರಣವೇ ನಿನಗಿಲ್ಲ. ನೀನಿನ್ನು ಅಯೋಧ್ಯೆಗೆ ಹೋಗಿ ಋತುಪರ್ಣನ ಮನೆಯಲ್ಲಿ ಒಂದು ವರ್ಷದ ವರೆಗೆ ಅಜ್ಞಾತವಾಸವನ್ನು ಮಾಡಿಕೊಂಡಿದ್ದರಾಯಿತು! ಕರ್ಕೋಟಕನ ವಿಷದ ಅಂಶವು ನಿನ್ನಲ್ಲಿ ಉಳಿದಿರುವುದರಿಂದ ಬೇಗನೆ ನಿನ್ನ ಮೈಬಣ್ಣ ಕಪ್ಪಾಗುವದು. ಆಮೇಲೆ ಸಹಸಾ ನಿನ್ನ ಗುರುತು ಯಾರಿಗೂ ಸಿಕ್ಕದು. ಕಲಿ

ಯನ್ನು ದಂಡಿಸುವ ಶಕ್ತಿಯು ನಿನ್ನಲ್ಲಿ ಬರುವಂತೆ ನಾನು ನಿನಗೊಂದು ಸುಲಭವಾದ ಮಂತ್ರವನ್ನು ಜಪಿಸಹೇಳುವೆನು ? ಹಿಂದಕ್ಕೆ ಇದೇ ಮಂತ್ರವನ್ನು ನಾನು ಧ್ರುವರಾಜನಿಗೆ ಹೇಳಿದ್ದೆನು. (ರಾಜನ ಕಿವಿಯಲ್ಲಿ ಮಂತ್ರೋಪದೇಶವನ್ನು ಹೇಳುತ್ತಾನೆ.)

ಇಕೋ ಈ ಉತ್ತರೀಯವನ್ನು ತೆಗೆದುಕೊ! ಇದನ್ನು ನೀನು ಮೈಮೇಲೆ ಹಾಕಿಕೊಂಡಾಕ್ಷಣವೇ ನಿನ್ನ ಕಪ್ಪು ಬಣ್ಣವೆಲ್ಲ ಹೊರಟುಹೋಗುವದು. (ಕೊಡುತ್ತಾನೆ)

**ರಾಜಾ:**—ಮುನೀಂದ್ರರಿಂದ ಅನುಗ್ರಹಿತನಾದೆನು. (ನಮಸ್ಕರಿಸುತ್ತಾನೆ.)

**ನಾರದ:**—ರಾಜಾ ನಿನಗೆ ಉತ್ತರೋತ್ತರವಾಗಲಿ! (ನಾರಾಯಣ ನೆನಲು ಮೋಕ್ಷವೈ ಇತ್ಯಾದಿ ಹಾಡುತ್ತ ಹೋಗುತ್ತಾನೆ.)

(ತೆರೆ)

---

*

## ಐದನೆಯ ಪ್ರವೇಶವು

ಸ್ಥಳ:—ಚೇದಿರಾಜನ ಅರಮನೆ.

(ರಾಜಮಾತಾ, ಸುನಂದಾ, ಜೋಗಿನಿ, ದಾಸಿ.)

**ರಾಜಮಾತೆ:**—ಅಹಹಾ, ಬೀದಿಯಲ್ಲಿ ಯಾರೋ ಬಹು ಮಂಜುಲವಾಗಿ ಹಾಡುತ್ತಾರೆ. ಕೇಳಿದಿಯಾ ಸುನಂದೆ ?

**ಸುನಂದಾ:**—ಅಹುದು ! ಏನು ಸ್ವರವದು !! ಇಲ್ಲಿ ಕುಳಿತಿದ್ದರೂ ಹೇಗೆ ಸ್ಪಷ್ಟವಾಗಿ ಕೇಳಬರುತ್ತದೆ !

(ತೆರೆಯಲ್ಲಿ ಜೋಗಿನಿಯು ಹಾಡುತ್ತಾಳೆ)

ಧಾಟಿ:—' ಕಂಗಳಿದ್ದೇತಕೋ ಕಾವೇರಿ ರಂಗನ ನೋಡದ '

ನಂಬಲಿಬೇಡಿರೈ ಶ್ರೀ-ವೈಭವಂಗಳ ಮೋಹವಾ ॥ ಪಲ್ಲ ॥
ಅಂಬುಜನಾಭನ ಪಾದವ ನೇಮದಿ ।
ನಂಬಿರೆ ನಿತ್ಯಾನಂದವಹುದು ॥ ಅನುಪಲ್ಲ ॥
ಸುಲಭಸಾಧ್ಯ ಸಿರಿಯುನಾಥ-ನೊಲಿದ ಮೇಲೆ ಕಪಟಸಿರಿಗೆ ॥
ಹಲುಬಿ ಪರತ್ರಾನಂದ । ಕಳೆದುಕೊಳ್ಳಲಿ ಬೇಡಿ ಮೋಹವ ॥ ೧ ॥
ಸತ್ಯವ್ರತವೆ ಮೋಕ್ಷಕರವು । ಮೃತ್ಯುಗಂಜದ-ಲದನು ಚರಿಸಿ ॥
ನಿತ್ಯತೆಯನು ಪಡೆದ ಧ್ರುವನು । ತಥ್ಯವಿದನು ತಿಳಿದು ಮೋಹವ ॥ ೨ ॥

**ರಾಜಮಾತೆ:**—ವಸಂತೀ, ಆ ಹಾಡುವವಳನ್ನು ಕರೆ ಹೀಗೆ. ಅದೇ ಪದವನ್ನು ಮತ್ತೆ ಕೇಳುವ ಹಾಗಾಗಿದೆ.

**ವಸಂತಿ:**—(ಕಿಟಕಿಯ ಹತ್ತಿರ ಹೋಗಿ) ಯಾರಮ್ಮಾ ಹಾಡುವವಳು? ತುಸು ನಿಲ್ಲು. ದೇವಿಯವರು ನಿನ್ನ ಪದವನ್ನು ಕೇಳಲಿಚ್ಛಿಸಿರುವರು. ಹೀಗೆ ಬಾ !

**ಜೋಗತಿ:**—ಹಾಂ ! ತಾಯಿ ! ಹಾಗೇ ಆಗಲಿ ! (ನಂಬಲಿಬೇಡಿರೈ ಇತ್ಯಾದಿ ಪದವನ್ನು ಹಾಡುತ್ತಾಳೆ.)

**ಸುನಂದಾ:**—ಈಕೆ ಹಾಡಿದ ಪದವು ವೈರಾಗ್ಯಪರವಾಗಿದ್ದು ಬಹು ಸೊಗಸಾಗಿದೆ. ಈ ಜೋಗತಿಯ ಕಂಠವೆಂದರೆ ವೀಣಾರವವೇ. ಚೆಲುವೆ ಯಾದರೂ ಎಷ್ಟಿರುವಳೀಕೆ ! ರೂಪವತಿಯಾದ ಈ ಪ್ರೌಢೆಯು ಜೋಗತಿ ಯಾಕೆ ಆಗಿದ್ದಾಳು ?

ಧಾಟಿ:—' ಗಂಧವಹಾ ಮಕರಂದವ '

ಇಂದಿರೆಯೋ ನರ-ವಿಂಡವುಖಿಯು । ನಲು-
ವಿಂದೀ ಭುವನಕೆ ಬಂದವಳು ॥
ಇಂದು ಭಕುತ ಜನ ವೃಂದಕೆ ಮುಹದಾ ।
ನಂದವನೀಯಲು ಕರುಣಾಳು ॥ ೧ ॥

**ರಾಜಮಾತೆ:**—ಇವಳನ್ನು ನೋಡಿದರೆ ಸ್ವಕೀಯರನ್ನು ಕಂಡಂತಾಗಿ ನನ್ನ ಮನಸ್ಸಿನಲ್ಲಿ ಪ್ರೇಮವು ಉಕ್ಕುತ್ತಲಿದೆ. ಈ ಸುಂದರಿಯು ಯಾರಿರುವಳೋ ಕಾಣೆನು. ವಸಂತೀ, ಆ ಜೋಗತಿಗೆ ಈ ದಿವಸ ನಮ್ಮಲ್ಲಿ ಭೋಜನಕ್ಕೆ ಬರಹೇಳು ! ಅವಳಿಗೆ ಸ್ನಾನಕ್ಕೆ ಹಾಕಿ ಒಳ್ಳೇ ವಸ್ತ್ರಗಳನ್ನು ಉಟ್ಟುಕೊಳ್ಳಲಿಕ್ಕೆ ಕೊಟ್ಟು ನಮ್ಮ ಬಳಿಗೆ ಕರೆದುಕೊಂಡು ಬಾ !

**ವಸಂತೀ:**— ದೇವಿಯರ ಆಜ್ಞೆಯಂತೆ ಮಾಡುವೆನು. (ಹೋಗುತ್ತಾಳೆ)

**ಸುನಂದಾ:**—ಅಮ್ಮಾ, ಆ ಜೋಗತಿಯ ಮೋರೆಯ ಮೇಲೆ ನಮ್ಮ ದಮಯಂತೀ ಅಕ್ಕನ ಹೋಲಿಕೆ ತೋರುತ್ತದೆ; ನೀನು ನೋಡಿದಿಯೇನು ?

**ರಾಜಮಾತೆ:**— ಅಹುದು ನೋಡು ! ಸುನಂದೆ, ಹತ್ತುಪಾಲಿಗೆ ಅವಳು ದಮಯಂತಿಯೇ ಇರಬಹುದು ! ನಿಷಧ ದೇಶದಲ್ಲಿ ರಾಜ್ಯಕ್ರಾಂತಿಯಾದ ಸಂಗತಿ ನಿನಗೆ ತಿಳಿದೇ ಇದೆ ! ನಲರಾಜರೂ ದಮಯಂತಿಯೂ ಹೀಗೆ ವೇಷಾಂತರದಿಂದ ಸಂಚಾರ ಮಾಡುತ್ತಿರುವರಾದೀತು.

(ವಸಂತಿಯು ಪ್ರವೇಶಿಸುತ್ತಾಳೆ)

**ವಸಂತಿ:**—ದೇವಿಯುವರು ಆಲಿಸಬೇಕು ! ಜೋಗತಿಯು ಸ್ನಾನ ಮಾಡಿಕೊಂಡು ಪೂಜೆಗೆ ಕುಳಿತಿದ್ದಾಳೆ. ಪೂಜೆ ತೀರಿದ ಕೂಡಲೆ ಅವಳನ್ನು ಇಲ್ಲಿಗೆ ಕರೆತರುವೆನು. ಜೋಗತಿಯು ಮಾತ್ರ ಸಾಮಾನ್ಯಳಲ್ಲ ಕಂಡಿರಾ ! ಜರದ ದುಕೂಲವನ್ನು ಕೊಟ್ಟರೆ ಅವಳು ಉಟ್ಟುಕೊಳ್ಳಲಿಲ್ಲ. ದುರ್ವಾಂಕುರದ ಹೊರತಾಗಿ ಬೇರೆ ಕೇಶಾಭರಣವನ್ನು ಅವಳು ಕೈಯೆತ್ತಿ ಮುಟ್ಟಲಿಲ್ಲ ! ನಡೆನುಡಿಗಳನ್ನು ನೋಡಿದರಂತೂ ಅವಳು ರಾಜಕುಲದಲ್ಲಿ ಹುಟ್ಟಿದವಳೇ, ಸಂದೇಹವಿಲ್ಲ.

**ರಾಜಮಾತೆ:**—ತಿಳಿಯಿತು! ವಿರಹವ್ರತವನ್ನು ಧರಿಸಿರುವ ರಾಜಸ್ತ್ರೀಯೇ ಅವಳು! ಪೂಜೆ ತೀರಿದ ಬಳಿಕ ಆ ಸುಶೀಲೆಯನ್ನು ಸನ್ಮಾನದಿಂದ ಇತ್ತ ಕರಕೊಂಡು ಬಾ.

(ವಸಂತಿಯು ಹೋಗಿ ದಮಯಂತಿಯನ್ನು ಕರಕೊಂಡು ಬರುತ್ತಾಳೆ.)

**ವಸಂತೀ:**—(ದಮಯಂತಿಯನ್ನು ಕುರಿತು) ತಾಯಿ, ಹೀಗೆ ಬನ್ನಿರಿ. ಇವರೇ ರಾಜಮಾತೆಯವರು; ಇವರು ಸುನಂದಾದೇವಿಯವರು.

**ರಾಜಮಾತೆ:**—(ಭರದಿಂದೆದ್ದು) ಅವ್ವಯ್ಯಾ! ಮಗುವೇ ದಮಯಂತೀ ಬಾ! (ಅಪ್ಪಿಕೊಳ್ಳುತ್ತಾಳೆ)

**ಸುನಂದಾ:**—ಅಕ್ಕಾ ನಮಸ್ಕಾರ ಮಾಡುತ್ತೇನೆ. (ನಮಸ್ಕರಿಸುತ್ತಾಳೆ)

**ದಮಯಂತಿ:**— (ರಾಜಮಾತೆಯನ್ನು ಕುರಿತು) ದೊಡ್ಡಮ್ಮಾ!! (ಎಂದು ಉದ್ಗಾರ ತೆಗೆದು ದುಃಖಿಸುತ್ತಾಳೆ)

**ರಾಜಮಾತೆ:**— (ದಮಯಂತಿಯ ಕಣ್ಣೊರಿಸಿ) ಮಗುವೆ ದುಃಖಿಸಬೇಡವಮ್ಮಾ!!

**ಸುನಂದಾ:**—ಅಕ್ಕಾ, ನಿನ್ನವಸ್ಥೆ ಹೀಗಾಯಿತೆ!!

ಧಾಟಿ:—' ಕೋಮಲಾಂಗ ನಿನಗೆ ತಕ್ಕ ಮೋಹನಾಂಗಿಯು '

ತಾಪಸಿಯರ ವೇಷವೇನೆ ಸಾರ್ವಭೌಮಿನಿ ॥
ಭೂಷಗುಚಿತ ರತ್ನಮಾಲೆ ಕಸದಿ ಸೇರುವೊಲ್ ॥ ಪಲ್ಲ
ನೀರೆ ಕೋಮಲಾಂಗಿ ಹೀಗೆ ಮ್ಲಾನಳಾದಿಯಾ ॥
ಪಾರಿಜಾತ ಕಲಿಕೆಯುದುರಿ ಬಾಡುವಂತೆಯೇ ॥ ೧ ॥

**ದಮಯಂತಿ:**—ಸುನಂದೆ, ನೀಚೋನ್ನತವಾದ ಸ್ಥಿತಿಗಳು ಕಾಲಚಕ್ರದ ಗತಿಯಿಂದ ಸಕಲ ಮಾನವರಿಗೆ ಪ್ರಾಪ್ತವಾಗುವದುಂಟು. ಇದಕ್ಕಾಗಿ ನನಗೆ ವಿಷಾದವೇ ಇಲ್ಲ! (ರಾಜಮಾತೆಯನ್ನು ಕುರಿತು) ದೊಡ್ಡಮ್ಮಾ ಆರ್ಯಪುತ್ರರ ವರ್ತಮಾನವೇ ಇಲ್ಲ.

**ರಾಜಮಾತೆ:**—ದಮಯಂತೀ, ನೀನು ಯಾವಜ್ಜೀವ ಸೌಭಾಗ್ಯವತಿಯಾಗಿರುವೆಯೆಂದು ಪ್ರತ್ಯಕ್ಷ ದಮನ ಮಹರ್ಷಿಗಳೇ ಹೇಳಿರುವರಷ್ಟೆ? ಅಂಥವರ ಮಾತು ಎಂದಿಗೂ ಸುಳ್ಳಾಗಲಾರದು. ಬೇಗನೆ ನೀನು ಪತಿಯನ್ನೊಡಗೂಡಿ ವಿರಾಜಿಸುವಿ! ಚಿಂತಿಸಬೇಡ!!

**ದಮಯಂತಿ:**—ಅವ್ವಾ, ನಿಮ್ಮಂಥ ಹಿರಿಯರ ಆಶೀರ್ವಾದದಿಂದ ಏನಾಗಲಿಕ್ಕಿಲ್ಲ? ನಾನಂತೂ ಗಟ್ಟಿ ಮನಸ್ಸುಮಾಡಿ ಬಂದ ವಿಪತ್ತುಗಳಿಗೆ ತಲೆ ಕೊಟ್ಟೇ ಇರುವೆನು.

**ಸುನಂದಾ:**—ಅವ್ವಾ, ಅಕ್ಕನ ವೈಭವವು ಎಂಥಾದ್ದು! ಹೀಗೆ ಒಮ್ಮಿಂದೊಮ್ಮೆ ನಷ್ಟವಾಗಿ ಹೋಯಿತಲ್ಲ! ಲಕ್ಷ್ಮಿಯು ಚಂಚಲಳೆಂಬ ಮಾತು ಸುಳ್ಳಲ್ಲ!

**ದಮಯಂತಿ:**—ಸುನಂದೆ, ಹಾಗನ್ನಕೂಡದವ್ವಾ! ನಮ್ಮಲ್ಲಿರುವ ಪಾಪಕ್ಕಾಗಿಯೇ ನಾವು ವಿಪತ್ತಿಗೆ ಈಡಾಗುತ್ತೇವೆ.

ಧಾಟಿ:—'ಸುಳ್ಳೆ ಸುದತಿ ಶ್ರಮಿಸುವದು'

ಚಂಚಲತೆಯು ಲಕುಮಿಗಿಹುದೆ! ಮೂಢ ಮತವಿದು।
ಪರಮ ಮೂಢ ಮತವಿದು ॥ ಪಲ್ಲ ॥
ಯೋಗಸಾಧ್ಯನಲ್ಲದವನು ದೇವನವಳನು।
ಸುಗುಣಸಾರಳೆನುತೆ ತಾನು ತಾಳ್ದ ಹೃದಯದಿ
ಹರಿಯು ತಾಳ್ದ ಹೃದಯದಿ ॥ ೧ ॥
ಧರ್ಮಹೀನರನ್ನು ಸಿರಿಯು ಕಾಲಿಲೊದೆಯುಳೆ।
ನಿರ್ಮಲಾಂತರಾತ್ಮಗೇನು ಕೊರತೆ ಭುವನದಿ ॥
ಏನು ಕೊರತೆ ಭುವನದಿ ॥ ೨ ॥

**ಸುನಂದಾ:**—ಹಾಗಾದರೆ ನೀನೂ ನಲರಾಜರೂ ನಿರ್ದೋಷಿಗಳಾಗಿರಲು ನಿಮಗೀ ವಿಪತ್ತೇಕೆ? ನಿಮ್ಮ ಸತ್ವಪರೀಕ್ಷೆಗಾಗಿ ದೇವರು ಹೀಗೆ ಮಾಡಿದನೆನ್ನಬೇಕು!

ಧಾಟಿ:—'ಅಧಮ ಕಿತಿ ಪಾಲಕಾ'

ಸಾಧು ಮನ ನೋಡಲು ದೇವನವರಂ।
ಬಾಧಿಪನು ಲೀಲೆಯಿಂ ನಿಂದು ಬಳಿಯೊಳ್ ॥ ಪಲ್ಲ ॥
ಸುತ್ತಿಗೆಯು ಪೆಟ್ಟನಿಂ ಹೊಡೆದು ನೋಳ್ಪರು ವಜ್ರ ॥
ಒತ್ತಿ ಬೆಂಕಿಯೊಳಿಟ್ಟು ಹೇಮವನ್ನು ॥
ಮುತ್ತುಳಿದ ಕಾಜುಗಳ ಹೊಡೆದು ನೋಡುವದುಂಟೆ।
ಹಿತ್ತಾಳಿಯನು ಕಾಸಿ ನೋಳ್ಪರೇನೆ ॥ ೧ ॥

**ರಾಜಮಾತೆ:**—ದಮಯಂತೀ ನಡೆ ಭೋಜನದ ಸಮಯವಾಯಿತು. ಭೋಜನೋತ್ತರ ನಿನ್ನ ವೃತ್ತಾಂತವನ್ನು ಸಮಗ್ರವಾಗಿ ಕೇಳಬೇಕಾಗಿದೆ.

**ದಮಯಂತಿ:**—ನಡೆಯಿರಿ !!

( ತೆರೆ )

## ಆರನೆಯ ಪ್ರವೇಶ

ಸ್ಥಳ— ಅಯೋಧ್ಯೆಯಲ್ಲಿ ಋತುಪರ್ಣ ರಾಜನ ಅಶ್ವಶಾಲೆಯ
ಒಂದು ಭಾಗವು.

(ನಲರಾಜನು ಬಾಹುಕನೆಂಬ ಹೆಸರಿಟ್ಟುಕೊಂಡು ಋತುಪರ್ಣನ
ಅಶ್ವಪಾಲಕನಾಗಿ ಪ್ರವೇಶಿಸುತ್ತಾನೆ.)

**ಬಾಹುಕ:**—(ಓರ್ವನೆ) ನನ್ನೀ ಭ್ರೂಭಂಗಮಾತ್ರದಿಂದ ಬಲಾಢ್ಯರಾದ ರಾಜರು ಪಾದಾಕ್ರಾಂತರಾಗುತ್ತಿದ್ದರು. ನನ್ನ ಅನುಗ್ರಹ ಮಾತ್ರದಿಂದ ಯಃಕಶ್ಚಿತನಾದ ಪಾಮರನು ವಿಭವೈಶ್ವರ್ಯಗಳಲ್ಲಿ ಲೋಲಾಡುತ್ತಿದ್ದನು. ಅಂಥ ನಲಸಾರ್ವಭೌಮನಾದ ನಾನು ಸಾಧಾರಣನಾಗಿರುವ ಈ ಋತುಪರ್ಣನ ಮನೆಯಲ್ಲಿ ಕುದುರೆಯ ವೃತ್ತಿ ಕೈಕೊಂಡು ಜೀವಿಸಬೇಕಾಯಿತಲ್ಲೆ ! ಈ ನನ್ನ ವಿಲಕ್ಷಣವಾದ ರೂಪವೇನು ! ಈ ವಿಚಿತ್ರವಾದ ವೇಷವೇನು ! (ಹಣೆಗೆ ಕೈ ಬಡಕೊಂಡು) ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತು !! (ಕೈಯಲ್ಲಿಯ ಚಬಕದಿಂದ ಲಡ್ಡು ಕಟಿದಂತೆ ಮಾಡಿ) ಚಬಕವೆ, ನೀನು ಕುದುರೆಗಳ ಜವೆಯಿಂದ ಹುಟ್ಟಿ ಆ ಕುದುರೆಗಳನ್ನೇ ಒಳಿತಾಗಿ ಸೆಳೆದು ಯಜಮಾನನ ಹಸ್ತಾವಲಂಬನದ ಹೆಮ್ಮೆಯಿಂದ ಶಬ್ದಪ್ರಹಾರವನ್ನು ಮಾಡುತ್ತಿರುವೆ. ದುರ್ಜನನಿಗೆ ಸಮಾನನಾದ ನಿನ್ನ ಆಧಾರದಿಂದಲೇ ಈ ನಲಚಕ್ರವರ್ತಿಯು ಬಾಳಬೇಕಾಯಿತೆ ? ಆಗಲಿ !!

ನನ್ನ ಅವಸ್ಥೆಯು ಏನಾದರೂ ಆಗಿಕೊಳ್ಳಲೊಲ್ಲದೇಕೆ, ಆದರೆ ದೋಷರಹಿತಳೂ ಪರಮ ಪತಿವ್ರತೆಯೂ ಉದಾರಳೂ ದೀನವತ್ಸಲೆಯೂ ಆಗಿರುವ ನನ್ನ ಪ್ರೇಮದರಸಿಯನ್ನು ವಿಪತ್ತಿಗೀಡುಮಾಡುವದು ಸರ್ವಸಾಕ್ಷಿಮಂತನಾದ ಪ್ರಭುವೆ, ನಿನಗೆ ನ್ಯಾಯವೆ ? (ಆಲೋಚಿಸುತ್ತ ಅಡ್ಡಾಡಿ) ನ್ಯಾಯವೇ ಸರಿ.

**ರಾಗ—ಬಸಂತ. ಧಾಟಿ—'ಏನು ಉಪಕೃತಿ'**

**ರೀತಿಯಿರುವದೀ ಲೋಕದಿ ತಾನೆ ॥ ಪಲ್ಲ ॥**
**ಅಡವಿಯು ಜಾಲಿಯು ಕಡಿದಿಡುವಾಗಲು**
**ತೊಡಕಿದ ಬಳ್ಳಿಯು ಕಡಿಯುವರಾಗಲೆ ॥ ೧ ॥**

ಪಾಪಿಯೆನ್ನನು ಶ್ರೀಪತಿ ಶಾಸಿಸೆ
ತಾಪವಿದಾಯಿತು ಆ ಪತಿದೇವಿಗೆ ॥ ೨ ॥

ಉಪಾಯವಿಲ್ಲದ ಮಾತಿಗೆ ಚಿಂತೆಮಾಡಿ ಫಲವೇನು. ಮಾಡಿದ ಕರ್ಮವನ್ನು ತೊಳೆದುಕೊಳ್ಳುವದಕ್ಕೆ ಸ್ವಸ್ಥಚಿತ್ತನಾಗಿ ನಾರದರು ಹೇಳಿದಂತೆ ಆಚರಿಸುವದು ಯುಕ್ತವು. ಓಂ ನಮೋ ಭಗವತೇ ವಾಸುದೇವಾಯ! ಓಂ ನಮೋ ಭಗವತೇ ವಾಸುದೇವಾಯ!! (ಎಂದು ಜಪಮಣಿಗಳನ್ನು ಎಣಿಸುತ್ತಾನೆ.)

(ಸೇವಕನೊಬ್ಬನು ಪ್ರವೇಶಿಸುತ್ತಾನೆ.)

**ಸೇವಕ:**—(ತನ್ನಷ್ಟಕ್ಕೆ) ಬಾಹುಕನು ಇಲ್ಲಿಯೇ ಇರುವನು. ಇವನು ಸಾಮಾನ್ಯನಾದ ಪುರುಷನಲ್ಲವೆಂದು ಅನೇಕರು ತರ್ಕಿಸುವದು ಯಥಾರ್ಥವು. ಇವನ ಗಾಂಭೀರ್ಯ, ಇವನ ವರ್ಚಸ್ಸು, ಇವನ ನಡೆನುಡಿಗಳನ್ನು ಕಂಡು ಆದರದಿಂದಲೇ ಇವನೊಡನೆ ನಡಕೊಳ್ಳುವ ಮನಸ್ಸಾಗುತ್ತದೆ. (ಬಾಹುಕನನ್ನು ಕುರಿತು) ಸತ್ವಶಾಲಿಯೇ, ಸೇನಾಪತಿಗಳು ನಿನ್ನನ್ನು ಕರೆದಿದ್ದಾರೆ.

**ಬಾಹುಕ:**—ನನ್ನನ್ನು ಸೇನಾಪತಿಯು ಕರೆಯುವನೆ!

**ಸೇವಕ:**—(ನಕ್ಕು) ಮಹಾತ್ಮನೆ, ನೀನಾವನೇ ಇರಲಿ, ಈ ರಾಜಧಾನಿಯಲ್ಲಿ ನೀನು ಸೇವಾವೃತ್ತಿಯನ್ನು ಅಂಗೀಕರಿಸಿಕೊಂಡಿರುವದನ್ನು ಮರೆಯಲಾಗದು. ಮೊನ್ನೆ ಮಹಾರಾಜರು ನಿನಗೊಂದು ಮಾತು ಕೇಳಿದಾಗ ನೀನು ಮಹಾರಾಜರಿಗೆ ಆಜ್ಞೆ ಮಾಡುವವನಂತೆ ಮಾತಾಡಿದಿ. ದುರ್ದೈವಿಯಾದ ಮಹಾತ್ಮನಿರಬಹುದೆಂದು ನಂಬಿ ರಾಜರು ನಕ್ಕು ಸುಮ್ಮನಾದರು. ಇನ್ನುಮೇಲಾದರೂ ನೀನು ತುಸು ಎಚ್ಚರದಿಂದ ನಡಕೊಳ್ಳಬೇಕು.

**ಬಾಹುಕ:**—ನಿಜಗುಣಿ, ನೀನು ಹೇಳುವದು ವಿಹಿತವು. ಹೊತ್ತೇರಿದಂತೆ ಕೊಡೆ ಹಿಡಿಯುವದೇ ಒಳ್ಳೇದು. ನಡೆ ಹೋಗೋಣ.

(ಹೋಗುತ್ತಾರೆ)

# ಐದನೆಯ ಅಂಕವು

## ಮೊದಲನೆಯ ಪ್ರವೇಶ

ಸ್ಥಳ:—ವಿದರ್ಭರಾಜನ ಅಂತಃಪುರ.

(ದಮಯಂತಿಯೂ ಸಖೀಜನರು)

**ದಮಯಂತಿ:**—(ಓವರ್ಗಳೆ)

ಧಾಟಿ—'ಮಾಧವ ಮಂಗಲಧಾಮಾ ಬಾರೊ'

ಪ್ರೇಮದ ಸಿಂಧುವೆ ಕಾಂತಾ ಬಾರೊ
ಕಾಂತಾ, ಮಾನಸ ಚಿಂತಾ ಹಾರಾ ॥ ಪಲ್ಲ ॥
ಸಿಂಗರ ನೀನೇ ಮಂಗಲ ನೀನೇ ॥
ಕಂಗಳ ಪ್ರೀತಿಯು ಕಾಂತನೆ ನೀನೇ ॥ ೧ ॥

(ಚಂದ್ರಾವಲಿಯೂ ವಸುಮತಿಯೂ ಪ್ರವೇಶಿಸುತ್ತಾರೆ)

**ಚಂದ್ರಾ:**—ಪ್ರಿಯ ಸಖಿ ದಮಯಂತೀ, ಏನು ಮಾಡುತ್ತಿರುವಿ ?

**ದಮಯಂತಿ:**—ಬನ್ನಿರಿ. ಏನು ಮಾಡಲಿ ಗೆಳತಿಯರೆ? ಪ್ರಲಾಪ ಮಾಡುವದೊಂದೇ ನನ್ನ ಪಾಲಿಗೆ ಇಟ್ಟದೆ; ಅದನ್ನೇ ಮಾಡುತ್ತಿರುವೆನು.

**ಚಂದ್ರಾ:**—ಪ್ರಿಯ ಸಖಿ, ಸಾರ್ವಭೌಮಿನಿಯಾಗಿ ಪ್ರಜಾಪರಿಪಾಲನವನ್ನು ಮಾಡಿದ ಜಾಣೆಗೆ ಅಜ್ಞಾನಿಗಳಾದ ನಾವು ಸಮಾಧಾನವನ್ನು ಹೇಳಲು ಸಮರ್ಥರೆ? ಆದರೂ ನಲಮಹಾರಾಜರಂಥ ಲೋಕೈಕವೀರರು ಬೇಗನೆ ವಿಪತ್ತುಗಳನ್ನು ಕಡಿದು ಹಾಕಿ ಮತ್ತೆ ಸಿಂಹಾಸನವನ್ನು ಅಲಂಕರಿಸುವರೆಂದು ಬುದ್ಧಿವಂತರು ಮಾತಾಡುತ್ತಿರುವರು.

**ದಮಯಂತಿ:**— ಚಂದ್ರಾ, ಸಿಂಹಾಸನದ ಅಪೇಕ್ಷೆ ನನಗಿಲ್ಲ ಕಂಡಿಯಾ! ವಿಪತ್ತಿನ ಕಾಲದಲ್ಲಿ ಪ್ರಾಣಕಾಂತರ ಸೇವೆಗಾಗದವಳಾದ ನಾನು ಬದುಕಿದ್ದು ಫಲವೇನು ಹೇಳಬಾರದೆ?

**ಚಂದ್ರಾ:**—ದಮಯಂತೀ, ಈ ನಿನ್ನ ಪುಣ್ಯಕರವಾದ ಉದ್ಗಾರವು ನಿಜವಾಗಿ ಸ್ತುತ್ಯವಾದದ್ದು !

**ವಸುಮತಿ:**—ದಮಯಂತೀ, ಈ ನಿನ್ನ ಉದ್ಗಾರವನ್ನು ನಲರಾಜರು ಕೇಳಿದ್ದಾದರೆ ಅವರು ಕೃತಾರ್ಥರಾಗಿ ತಮಗೆ ಬಂದ ವಿಪತ್ತೇ ಕಡೆತನಕ ಇರಲೆಂದು ಬಯಸಬಹುದು. ಅದಕ್ಕಾಗಿ ಇಂಥ ನುಡಿಯನ್ನು ಮತ್ತೊಮ್ಮೆ ಉಚ್ಚರಿಸಬೇಡ.

**ದಮಯಂತಿ:**—(ವಿಷಾದದಿಂದ ನಕ್ಕು) ವಸುಮತೀ, ನೀನು ಅಳುವವರನ್ನು ಕೂಡ ನಗಿಸುವಾಕೆ! ಪ್ರಾಣಕಾಂತರಿಗೆ ವನವಾಸವೇ ಇಷ್ಟವಾದರೆ ಅದು ನನಗಾದರೂ ಇಷ್ಟವೇ ಅಲ್ಲವೆ? ಅವರಿದ್ದಲ್ಲಿಗೆ ನೀನು ನನ್ನನ್ನು ಕಳಿಸಿಕೊಟ್ಟರೆ ಸಾಕು.

**ವಸುಮತಿ:**—ಅವರೇ ನೀನಿದ್ದಲ್ಲಿಗೆ ಬಂದರೆ ಹೇಗೆ?

**ದಮಯಂತಿ:**—ನಿನ್ನ ಬಾಯಿಯಲ್ಲಿ ಅಮೃತ ತುಂಬಲಿ! ವಸುಮತೀ, ಆರ್ಯಪುತ್ರರನ್ನು ಕಾಣುವ ಬಗೆ ಹೇಗೆ ಹೇಳಬಾರದೆ?

**ವಸುಮತಿ:**— ನಮ್ಮ ರಾಜರು ನಲಮಹಾರಾಜರ ಶೋಧವನ್ನು ಮಾಡದೆ ಇರುವರೆ? ನೀನು ಯೋಚಿಸಬೇಡ!

**ದಮಯಂತಿ:**—ಒಣ ಸಮಾಧಾನದ ಮಾತುಗಳನ್ನು ಕೇಳಿಕೇಳಿ ಬೇಸತ್ತಿರುವೆನು.

ಧಾಟಿ—'ಫುಲವನಕೀ ಗೆಂದನ'

ನೆನೆ-ನೆನಿಸಿ ಕಾಂತನನೀಪರಿ ನಾನು। ವ್ಯೆ-ಮರೆವೆ ಹಾ॥ ಪಲ್ಲ॥
ಮಾತೆಗೆ ಕೇಳಿ ತಾತನಿಗೆ। ಈ ತಾಪ।
ಶೀತಲವಾಗಿಹುದೆ, ಸುಜಾತೆ ॥ ೧ ॥

**ಚಂದ್ರಾ:**—ಹಾಗೆನ್ನಕೂಡದು ದಮಯಂತೀ! ರಾಜರು ಮಾಡುವಷ್ಟು ಯತ್ನವನ್ನು ಮಾಡಿಯೇ ಮಾಡುತ್ತಿರುವರು. ಯಾಕೆ ವಸುಮತೀ, ನಿನ್ನ ಪತಿರಾಯರೂ, ರಾಜರೂ ಕೂಡಿ ಒಂದು ಯುಕ್ತಿಯನ್ನು ತೆಗೆದಿರುವರೆಂದು ನೀನೇ ಹೇಳಿದಿಯಲ್ಲ!

**ದಮಯಂತಿ:**—ಏನದು ವಸುಮತೀ?

**ವಸುಮತಿ:**—ನಲಮಹಾರಾಜರು ಇಲ್ಲಿಗೆ ತಾವಾಗಿ ಬರುವಂತೆ ನಮ್ಮ ರಾಜರು ಯುಕ್ತಿಯನ್ನು ತೆಗೆದಿರುವರಂತೆ.

**ದಮಯಂತಿ:**—ಎಂಥ ಹಂಚಿಕೆಯದು ?

**ವಸುಮತಿ:**—ನಮ್ಮ ಮುಂದೆ ಹೇಳಬಾರದಂತೆ ! ಬರುವ ವಿಜಯಾ ದಶಿಮಿಗೆ ನಿನ್ನ ಪ್ರಿಯತಮರು ನಿನಗೆ ದರ್ಶನ ಕೊಟ್ಟರಾಯಿತೊ ಇಲ್ಲವೊ ?

**ದಮಯಂತಿ:**— (ಆನಂದವನ್ನು ತಾಳಿ) ನಿನ್ನ ಬಾಯಿಹರಿಕೆಯಿಂದ ಹಾಗೇ ಆಗಲಿ ವಸುಮತೀ !

ಧಾಟಿ:—'ಬಂದದ್ದೇನಿದು ಕುಂದು'

ಚತುರೆ ನಿನ್ನಯ ಶುಭದ ನುಡಿಯಿಂ ।
ಪತಿಯ ಮುಖವನು ಕಾಣ್ಬನಾದೊಡೆ ॥
ಪತಿವ್ರತಾಮಣಿ ನಿನ್ನ ನಾಮವ ।
ಸತತವಾಗಿಯು ನೆನೆವೆ ಪ್ರೇಮದಿ ॥ ೧ ॥

## ಎರಡನೆಯ ಪ್ರವೇಶವು

(ಋತುಪರ್ಣನೂ ಬಾಹುಕನೂ.)

ಸ್ಥಳ:—ಅಯೋಧ್ಯೆಯಲ್ಲಿಯ ಋತುಪರ್ಣನ ಅರಮನೆ.

**ಋತುಪರ್ಣ:**—(ಓರ್ವನೆ) ಚೇದಿರಾಜನ ತಂಗಿಯಾದ ಸುನಂದಾ ಕುಮಾರಿಯ ಸ್ವಯಂವರವು ತಮ್ಮ ರಾಜಧಾನಿಯಲ್ಲಿ ಆಗುವದೆಂದು ವಿದರ್ಭ ರಾಜರು ಬರೆಯುತ್ತಾರೆ. ಸುನಂದೆಯು ಪರಮ ಸುಂದರಿಯಾದ ತರುಣಿಯು. ಸ್ವಯಂವರ ಮಂಟಪದಲ್ಲಿ ನೆರೆದ ರಾಜರಲ್ಲಿ ವಧುವಿನಿಂದ ಆರಿಸಲ್ಪಟ್ಟ ಕ್ಷತ್ರಿಯನೇ ಧನ್ಯನು! ವಿದರ್ಭರಾಜರ ನಿಮಂತ್ರಣದ ಮೇರೆಗೆ ನಾನು ಸ್ವಯಂವರ ಸಮಾರಂಭಕ್ಕೆ ಹೋಗಲೇ ಹೋಗುವೆನು.

ಭೀಮಕರಾಜರು ಮತ್ತೇನು ಬರೆಯುತ್ತಾರೆ? (ಪತ್ರವನ್ನು ಓದುತ್ತಾನೆ) ಸ್ವಯಂವರದ ಪೂರ್ವ ದಿವಸದಲ್ಲಿ ಅಶ್ವವಿದ್ಯಾಕೌಶಲ್ಯಗಳ ಪ್ರದರ್ಶನಗಳಾಗು ವವು. ಆಗ ಕುದುರೆಗಳನ್ನು ಓಡಾಡಿಸುವ ಕೆಲಸಕ್ಕೆ ಹೆಚ್ಚಿನ ಮಹತ್ವ ವನ್ನಿಟ್ಟು ಎಲ್ಲರಿಗಿಂತಲೂ ತನ್ನ ಕುದುರೆಯನ್ನು ಮುಂದೆ ಓಡಿಸಿಕೊಂಡು ಬಂದ ಚತುರನಿಗೆ ಅನರ್ಘವಾದ ಅಶ್ವರತ್ನವನ್ನು ಕಾಣಿಕೆಯಾಗಿ ಕೊಡುವ ದಲ್ಲದೆ ಅವನಿಗೆ "ಅಶ್ವವಿದಾಂ ಶಿರೋಮಣಿಃ" ಎಂಬ ಬಿರುದು ಕೂಡಾ ಕೊಡ ಲ್ಪಡುವುದು. (ಪತ್ರವನ್ನು ಮುಚ್ಚಿ) ಕಂಚುಕೀ!

(ಕಂಚುಕಿಯು ಪ್ರವೇಶಿಸುತ್ತಾನೆ)

**ಕಂಚುಕಿ:**— ಮಹಾರಾಜರಿಗೆ ಜಯಜಯಕಾರವಿರಲಿ! ದೇವರು ಆಜ್ಞಾಪಿಸಬೇಕು.

**ಋತುಪರ್ಣ:**—ಕಂಚುಕೀ! ಬೇಗನೆ ಬಾಹುಕನನ್ನು ಕರಿಸು.

**ಕಂಚುಕಿ:**—ಆಜ್ಞೆ! (ಹೋಗುತ್ತಾನೆ)

**ಋತುಪರ್ಣ:**—(ತನ್ನಷ್ಟಕ್ಕೆ) ಬಾಹುಕನ ಅಶ್ವವಿದ್ಯಾಕೌಶಲ್ಯವು ನಿಸ್ಸೀಮವಾದದ್ದು! ಸೊಕ್ಕೇರಿದ ಕುದುರೆಗಳು ಅವನನ್ನು ಕಂಡಾಕ್ಷಣವೇ ಥರಥರನೆ ನಡುಗುತ್ತವೆ. ಅವನು ಹತ್ತಿದನೆಂದರೆ ಮಂದಗತಿಯ ಕುದುರೆ ಗಳು ಕೂಡಾ ಗಾಳಿಯಂತೆ ಹಾರುತ್ತ ಓಡುತ್ತವೆ. ರಥವನ್ನು ಹೊಡೆಯ ಬೇಕಾದರೆ ಅವನೇ! ಗಿರಿಕಾನನಗಳಲ್ಲಿ ಕೂಡ ಅವನ ರಥವು ರಾಜಮಾರ್ಗ

ದಲ್ಲಿ ನಡೆದಿರುವ ಸಡಗರದಿಂದ ಓಡುವದು. ಅಶ್ವವಿದ್ಯೆಯ ಅನೇಕವಾದ ಚಾತುರ್ಯಗಳನ್ನು ಅವನಿಂದ ನಾನು ಕಲಿತುಕೊಂಡು ಎಲ್ಲರಿಗೂ ಮಿಗಿಲಾಗಿ ರುವೆನು. ಕುಂಡಿನಪುರದಲ್ಲಾಗುವ ಪ್ರದರ್ಶನಗಳಲ್ಲಿ ನಾನು ಖ್ಯಾತಿಯನ್ನು ಹೊಂದಿಯೇ ಬಿಡುವೆನು.

(ಬಾಹುಕ ಕಂಚುಕಿಗಳು ಪ್ರವೇಶಿಸುತ್ತಾರೆ)

**ಋತುಪರ್ಣ:**—ಬಾಹುಕಾ ! ಬಂದಿಯಾ ? ಸತ್ವಶಾಲಿಯೇ, ಚೇದಿ ರಾಜನ ತಂಗಿಯಾದ ಸುನಂದಾ ಕುಮಾರಿಯ ಸ್ವಯಂವರವು ಕುಂಡಿನಪುರ ದಲ್ಲಾಗುವದೆಂದು ಭೀಮಕರಾಜರು ಬರೆದಿರುತ್ತಾರೆ. ನಾವು ಆ ಸ್ವಯಂವರಕ್ಕೆ ಹೋಗತಕ್ಕವರಾಗಿರುತ್ತೇವೆ. ಬೇಗನೆ ರಥವನ್ನು ಸಿದ್ಧಪಡಿಸು.

**ಬಾಹುಕ:**— ಪ್ರಭುಗಳ ಆಜ್ಞೆಯಂತೆ ಆಗಲಿ ! (ತನ್ನಷ್ಟಕ್ಕೆ) ಸುನಂದೆಯ ಸ್ವಯಂವರವು ವಿದರ್ಭರಾಜನ ಮನೆಯಲ್ಲಿ ಯಾಕೆ ? (ಆಲೋಚಿಸಿ) ಭೀಮಕರಾಜನ ರಾಣಿಯೂ ಚೇದಿರಾಜನ ಮಾತೆಯೂ ಅಕ್ಕ ತಂಗೆಂದಿರು. ಅವರಿಬ್ಬರ ಮನಸ್ಸಿನಲ್ಲಿ ಸುನಂದೆಯ ಸ್ವಯಂವರವನ್ನು ಕುಂಡಿನ ಪುರದಲ್ಲಿ ಮಾಡಬೇಕೆಂಬದಾಗಿದ್ದರೆ ಚೇದಿರಾಜನಾಗಲೀ ಭೀಮಕರಾಜನಾಗಲಿ ಬೇಡೆನ್ನಲಾರರು.

**ಋತುಪರ್ಣ:**—ಬಾಹುಕಾ, ಸ್ವಯಂವರದ ಪೂರ್ವದಿನಸ ಕುಂಡಿನ ಪುರದಲ್ಲಿ ಅಶ್ವವಿದ್ಯೆಯ ಪ್ರದರ್ಶನಗಳಾಗುವವಂತೆ ! ಆ ಸಮಯದಲ್ಲಿ ನಾವಾ ದರೂ ನಮ್ಮ ಕೌಶಲ್ಯವನ್ನು ತೋರಿಸಬಾರದೇಕೆ ?

**ಬಾಹುಕ:**—ಅವಶ್ಯ ! ಮಹಾರಾಜರಿಗೆ ನಾನು ಅಶ್ವವಿದ್ಯೆಯ ರಹಸ್ಯ ವನ್ನೆಲ್ಲ ತಿಳಿಸಿಕೊಟ್ಟಿರುವೆನು. ಆ ಪ್ರದರ್ಶನಗಳಲ್ಲಿ ಮಹಾರಾಜರು ಒಳ್ಳೇ ಯಶಸ್ವಿಗಳಾಗುವದು ಸತ್ಯ !

**ಋತುಪರ್ಣ:**—(ನಕ್ಕು) ಹಾಗಾದ ಪಕ್ಷದಲ್ಲಿ ನಿಮ್ಮ ಮಹಾರಾಜರ ಕೀರ್ತಿಯು ಹೊರಟುಹೋಗುವದು.

**ಬಾಹುಕ:**—ಅದು ಹೇಗೆ ?

**ಋತುಪರ್ಣ:**—ಅಶ್ವಹೃದಯ ವಿದ್ಯೆಯಲ್ಲಿ ನಲರಾಜರೊಬ್ಬರೇ ಜಗ ತ್ತಿಗೆ ಮಿಗಿಲಾದವರು. ‘ ಇನ್ನು ಅಶ್ವವಿದಾಂ ಶಿರೋಮಣಿಃ’ ಎಂಬ ಬಿರುದು ಅನ್ಯರಿಗೆ ಪ್ರಾಪ್ತವಾದರೆ ನಲರಾಜರ ಕೀರ್ತಿಗೆ ಹಾನಿಯಲ್ಲವೆ ?

**ಬಾಹುಕ:**—ರಾಜನ್, ದುರ್ದೈವವಾಗಲಿ, ಶತ್ರುಗಳಾಗಲಿ ಸಂಪತ್ತು ಸಾಮ್ರಾಜ್ಯಗಳನ್ನು ಅಪಹರಿಸಬಲ್ಲರು. ಆದರೆ ವೀರನ ಪರಾಕ್ರಮವನ್ನೂ, ಸಾಧುವಿನ ಸತ್ವಗುಣವನ್ನೂ, ಬುದ್ಧಿವಂತನ ವಿದ್ಯೆಯನ್ನೂ ಯಾರೂ ಅಪ ಹರಿಸಲಾರರು. ನಮ್ಮ ಮಹಾರಾಜರಿಗೆ ಈ ಪ್ರದರ್ಶನದ ವರ್ತಮಾನ ತಿಳಿ ದರೆ ಅವರು ಆ ಬಿರುದನ್ನು ಅನ್ಯರಿಗೆ ಎಂದಿಗೂ ಹೋಗಗೊಡರು.

**ಋತುಪರ್ಣ:**—ಸತ್ಯ! ಆದರೆ ನಲಮಹಾರಾಜರು ಬಾರದಿದ್ದಲ್ಲಿ ನಮಗೆ ಯಶಸ್ಸು ಸಿಕ್ಕುವದು ನಿಜವಷ್ಟೆ? ಇಲ್ಲಿ ಯಶಸ್ಸು ಪ್ರಾಪ್ತವಾದರೆ ಸ್ವಯಂವರದಲ್ಲಿ ಸುನಂದಾ ಕುಮಾರಿಯು ನನಗೇ ಮಾಲೆ ಹಾಕುವಳು.

**ಬಾಹುಕ:**—(ನಕ್ಕು) ಸುನಂದಾದೇವಿಯರ ಒಲುಮೆಗೆ ಇದೊಂದು ಕಾರಣವೇ ಸರಿ! ಆದರೂ ಮಹಾರಾಜ, ವಿದ್ಯೆಯು ಕೆಲಸವಿದು. ನಾವು ನಮ್ಮ ಸಂಧಾನದಲ್ಲಿಯೇ ಇರಬೇಕು. ಮಹಾರಾಜರಿಗಿಂತಲೂ ಬೇರೊಬ್ಬ ರಾಜನು ಅಗ್ರೇಸರನಾಗುವ ಸಂಭವ ತೋರಿದರೆ ನಾನೇ ಬಲಾಹಕನನ್ನೇರಿ ಕೊಂಡು ಆ ರಾಜನನ್ನು ಹಿಂದೆ ಹಾಕಿ ಅಯೋಧ್ಯೆಗೆ ಕೀರ್ತಿಯನ್ನು ತರುವೆನು.

**ಋತುಪರ್ಣ;**—ಚನ್ನಾಗಿ ಮಾತಾಡಿದಿ. ಕುದುರೆ ರಥಗಳ ಸಿದ್ಧತೆ ಯನ್ನು ಮಾಡಿಕೊಂಡಿರು. ಇಂದೆಯೆ ಹೊರಡಬೇಕು.

**ಬಾಹುಕ:**—ಆಜ್ಞೆ. (ಪ್ರಣಾಮ ಮಾಡಿ ಹೋಗುತ್ತಾನೆ)

(ತೆರೆ)

## ಮೂರನೆಯ ಪ್ರವೇಶ

ಸ್ಥಳ:—ನಿಷಧಪುರದಲ್ಲಿ ಅಮಾತ್ಯನ ಮನೆ

(ಅಮಾತ್ಯ, ಸೇನಾಪತಿ, ಸೇವಕ)

**ಅಮಾತ್ಯ**:—(ಓರ್ವನೆ) ರಾಜಕಾರಣಕ್ಕಾಗಿ ನಾನು ಪುಷ್ಕರನ ಪಕ್ಷ ವನ್ನು ಅಂಗೀಕರಿಸಿದಂತೆ ನಟಿಸುತ್ತಿರುವೆನು. ಬಂದ ಪ್ರಸಂಗಕ್ಕೆ ಮಾಡುವ ದೇನು ? ಪುಷ್ಕರನಿಂದಲೂ ಆತನ ಅನುಯಾಯಿಗಳಿಂದಲೂ ಪ್ರಜಾಜನರಿಗೆ ಬಾಧೆಯಾಗದಂತೆ ನಿರ್ವಾಹ ಮಾಡಿಕೊಂಡು ಹೋಗಬೇಕಾದರೆ ಸೋತು ಸೋತು ಹೋದೆನು. ಒಡಕು ಗಂಟೆಯನ್ನು ಹೇಗೆ ಬಾರಿಸಿದರೂ ಅಪಸ್ವರವೆ ! ಅವಿವೇಕಿಯೂ, ವಿಷಯಾಂಧನೂ ಆದ ಪುಷ್ಕರನು ಉಚ್ಛೃಂಖಲನಾಗಿ ವರ್ತಿಸುತ್ತಿರುವನು. ನಾನು ಅವನಿಗೂ ಬೇಕಾದವನಾಗಿರಬೇಕು; ಇತ್ತ ಪ್ರಜಾಜನರ ಹಿತವನ್ನೂ ಸಾಧಿಸಬೇಕು ! ಆದದ್ದಾಗಿ ಹೋಯಿತು. ಇನ್ನು ನಮ್ಮೆಲ್ಲರ ದುಃಖನಿವಾರಣದ ಸಮಯವು ಸಮಾಪಿಸಿತು. ಇಂದಿಗೆಂಟನೆಯ ದಿವಸವೇ ವಿಜಯಾದಶಿಮಿಯು. ಯಾರಲ್ಲಿ ? ಪ್ರತಾಪ !

(ಪ್ರತಾಪನು ಪ್ರವೇಶಿಸುತ್ತಾನೆ)

**ಪ್ರತಾಪ**:—(ಪ್ರಣಾಮ ಮಾಡಿ) ಆಜ್ಞಾಪಿಸಬೇಕು.

**ಅಮಾತ್ಯ**:—ಸೇನಾಪತಿಗಳನ್ನು ಕರೆಯಲಿಕ್ಕೆ ಹೋಗಿದ್ದಿಯಲ್ಲವೆ ? ಅವರಿನ್ನೂ ಬರಲಿಲ್ಲವೇಕೆ ? ನೀನು ಹೋದಾಗ ಅವರೇನು ಮಾಡುತ್ತಿದ್ದರು?

**ಪ್ರತಾಪ**:—ಸೇನಾಪತಿಗಳು ಸೈನ್ಯಾಧಿಕಾರಿಗಳನ್ನೆಲ್ಲ ಕೂಡಿಸಿಕೊಂಡು ಆಲೋಚಿಸುತ್ತಿರುವರು. ಬೇಗನೆ ಇಲ್ಲಿಗೆ ಬರತಕ್ಕವರಾಗಿರುವರು. (ಪ್ರತಾಪನು ಹೋಗುತ್ತಾನೆ)

**ಅಮಾತ್ಯ**:— ಸೇನಾಪತಿಯಾದ ಧೀರೇಂದ್ರಸಿಂಹನು ರಣಧುರಂಧರ ನಾಗಿರುವವಲ್ಲದೆ ಪರಮ ರಾಜನಿಷ್ಠನೂ ಅನಲಸನೂ ಕಾರ್ಯದಕ್ಷನೂ ಆಗಿ ರುವನು. ಇಂಥ ವೀರಾಗ್ರೇಸರನು ನನ್ನ ಇಚ್ಛಾನುವರ್ತಿಯಾಗಿರಲು ನಲ ಮಹಾರಾಜರನ್ನು ನಿಷಧಸಿಂಹಾಸನದ ಮೇಲೆ ಏಕೆ, ಪ್ರತ್ಯಕ್ಷ ಇಂದ್ರನ ಸಿಂಹಾ ಸನದ ಮೇಲೆ ಕುಳ್ಳಿರಿಸಬಹುದು.

(ಧೀರೇಂದ್ರನು ಪ್ರವೇಶಿಸುತ್ತಾನೆ)

**ಸೇನಾಪತಿ:**—(ಪ್ರಣಾಮ ಮಾಡಿ) ಅಮಾತ್ಯರೆ, ಕುಶಲವಷ್ಟೆ? ತಮ್ಮ ವಿಚಾರಗಳು ಎಲ್ಲಿಗೆ ಬಂದಿರುವವು ?

**ಅಮಾತ್ಯ:**— (ನಕ್ಕು) ಹೀಗೆ ವಿಶ್ರಮಿಸಿಕೊಂಡು ಮಾತಾಡಿರಿ. ಧೀರೇಂದ್ರಸಿಂಹ, ನಿಮ್ಮ ಭುಜಬಲದ ಮೇಲೆಯೇ ನಮ್ಮ ವಿಚಾರಗಳ ಹಾರಾಟವು ! ನಿಮ್ಮ ಆಲೋಚನವೆಲ್ಲಿಗೆ ಬಂದಿರುವದು ? ಎಲ್ಲವೂ ಸುವ್ಯವಸ್ಥಿತವಾಗಿ ನಡೆದಿರುವದೆಂದು ನಿಮ್ಮ ಮುಖಶ್ರೀಯೇ ಸೂಚಿಸುತ್ತಿರುವದು !

**ಸೇನಾಪತಿ:**—ವ್ಯವಸ್ಥೆಯ ಚಿಂತೆಯನ್ನೇ ಬಿಡರಿ ! ಕಾರ್ಯಗಳನ್ನು ಯಾವ ಕ್ರಮದಿಂದ ಜರಗಿಸಬೇಕೆಂಬುದನ್ನು ಅಮಾತ್ಯರು ಹೇಳಿಕೊಡುವದೊಂದೇ ತಡ; ಅದೇ ಕ್ರಮದಿಂದಲೇ ಆ ಕಾರ್ಯಗಳೆಲ್ಲ ಕೈಗೂಡಿದವೆಂದು ತಿಳಿಯಿರಿ.

**ಅಮಾತ್ಯ:**—ಸಾಧು ಧೀರೇಂದ್ರಸಿಂಹ, ಸಾಧು ! ನೀವು ಅಸಾಧಾರಣರಾದ ಕಾರ್ಯದಕ್ಷರಾಗಿರುವಿರಿ. ವಿಜಯಾದಶಿಮಿಯ ದಿವಸ ನಗರವಾಸಿಗಳೆಲ್ಲರೂ ಉತ್ಸವಗಳಲ್ಲಿ ನಿಮಗ್ನರಾಗಿರುವಂತೆ ವ್ಯವಸ್ಥೆ ಮಾಡಿದೆ. ಪುಷ್ಕರರಾಜನ ಸೇನೆಯೂ ನಗರರಕ್ಷಕರೂ ಕೂಡಿಯೇ ಉತ್ಸವಗಳಲ್ಲಿ ತಲ್ಲೀನರಾಗಿರುವರು. ಅಂಥ ಪ್ರಾಪ್ತಕಾಲದಲ್ಲಿ ನೀವು ನಿಮ್ಮ ಕೆಲಸಗಳನ್ನೆಲ್ಲ ಗೆದ್ದುಕೊಳ್ಳಬೇಕು.

**ಸೇನಾಪತಿ:**—ಅಮಾತ್ಯರೆ, ನಿಮ್ಮ ಕಾರ್ಯವೊಂದಾದರೆ ಆಯಿತೋ ಇಲ್ಲವೊ ? ಅದು ಗುಪ್ತರೀತಿಯಿಂದ ಆದರೇನು, ಘನಘೋರವಾದ ಸಂಗ್ರಾಮವನ್ನು ಮಾಡಿ ತೀರಿದರೇನು ?

**ಅಮಾತ್ಯ:**— ಸೇನಾಪತಿಗಳೇ, ನೀವು ಯುದ್ಧಮಾಡಿದರೆ ನಮ್ಮ ದೇಶದ ಜನರೊಡನೆಯೇ ಮಾಡಬೇಕಾಗುವದಲ್ಲವೆ ? ಅದಕ್ಕಾಗಿ ಹೇಳುತ್ತೇನೆ. ಆದಷ್ಟುಮಟ್ಟಿಗೆ ರಕ್ತಪಾತವು ಕಡಿಮೆಯಾಗಬೇಕು. ಪುಷ್ಕರನ ಜೀವಕ್ಕೆ ಅಪಾಯವಾಗಲೇ ಕೂಡದು.

**ಸೇನಾಪತಿ:**—ಪುಷ್ಕರನ ಜೀವಕ್ಕೆ ಅಪಾಯವಾಗಕೂಡದೆ ? ಏನು ಹೇಳುವಿರಿ ಅಮಾತ್ಯರೆ!!! ರಾಜದ್ರೋಹಿಯೂ ಭ್ರಾತೃದ್ರೋಹಿಯೂ ಆಗಿರುವ ಆ ನೀಚನು ಮಹಾರಾಜರ ತಮ್ಮನೆಂದು ಅವನನ್ನು ಕ್ಷಮಿಸುವದು ನೀತಿಗೆ ವಿರುದ್ಧವಾದದ್ದು !

**ಅಮಾತ್ಯ**:—ರಾಜಪುತ್ರನಾದ ಪುಷ್ಕರನಿಗೆ ದೇಹಾಂತ ಶಾಸನವನ್ನು ವಿಧಿಸುವ ಅಧಿಕಾರವು ನಮಗೆ ಬಾರದು. ಮೇಲಾಗಿ ನಾವು ಮಹಾರಾಜರಿಗೆ ಹದಿನಾಲ್ಕು ಲೋಕಗಳನ್ನು ಗೆದ್ದುಕೊಟ್ಟರೂ ಪುಷ್ಕರನ ಪ್ರಾಣಹರಣಕ್ಕಾಗಿ ಅವರು ನಮ್ಮನ್ನು ಎಷ್ಟುಮಾತ್ರವೂ ಕ್ಷಮಿಸಲಿಕ್ಕಿಲ್ಲ.

**ಸೇನಾಪತಿ**:— ಉಪಾಯವಿಲ್ಲ! ಈ ಮಹತ್ಕಾರ್ಯದ ಆರಂಭದಲ್ಲಿ ಪುಷ್ಕರನೆಂಬ ಪಶುವನ್ನು ಆಹುತಿಯಾಗಿ ಕೊಡಬೇಕೆಂದು ಮಾಡಿದ್ದೆನು!

**ಅಮಾತ್ಯ**:— ಇರಲಿ! ನಲಮಹಾರಾಜರ ಆಜ್ಞೆಯೆಂದು ತಿಳಿದು ಪುಷ್ಕರನಿಗೆ ಜೀವದಾನ ಕೊಡಿರಿ.

**ಸೇನಾಪತಿ**:—ಹಾಗಾದರೆ ನನ್ನದೊಂದು ಕೋರಿಕೆಯನ್ನು ಅಮಾತ್ಯರು ಚಿತ್ತೈಸಬೇಕು.

**ಅಮಾತ್ಯ**:— ಧೀರೇಂದ್ರಸಿಂಹ, ಬೇಕಾದ್ದು ಕೇಳಿಕೊಳ್ಳಿರಿ. ಅರ್ಧ ರಾಜ್ಯವನ್ನು ಬೇಡಿದರೂ ಸರಿ!

**ಸೇನಾಪತಿ**:—(ನಕ್ಕು) ಅಷ್ಟೇನು ಬೇಡ! ಮಹಾರಾಜರನ್ನು ಸಿಂಹಾಸನದ ಮೇಲೆ ಕುಳ್ಳಿರಿಸುವ ಮರ್ಯಾದೆ ನನ್ನದಾಗಬೇಕು.

**ಅಮಾತ್ಯ**:—(ನಕ್ಕು) ಇಷ್ಟೆಯೋ? ಧೀರೇಂದ್ರ ಸಿಂಹ, ನಿಮ್ಮ ಇಷ್ಟವಿದ್ದಂತಾಗಲಿ. ಈ ಮರ್ಯಾದೆ ನನಗೊಂದಾವರ್ತಿ ಸಲ್ಲಿದೆ. ನಡೆಯಿರಿನ್ನು ನಿಮ್ಮ ಕೆಲಸಕ್ಕೆ.

**ಸೇನಾಪತಿ**:— ಅಮಾತ್ಯರೆ, ನಾನು ಕೃತಾರ್ಥನಾದೆನು. ಬರುತ್ತೇನೆ. ನಮಸ್ಕಾರ.

---

## ನಾಲ್ಕನೆಯ ಪ್ರವೇಶ

ಸ್ಥಳ:—ನಿಷಧಪುರದ ಬೀದಿ

(ಕಲಿಯು ಪ್ರವೇಶಿಸುತ್ತಾನೆ.)

**ಕಲಿ:**—ಪುರುಷನೆಷ್ಟೇ ಬಲವಂತನಾಗಿರಲಿ, ಚತುರನಾಗಿರಲಿ, ಸಾಹಸಿಯಾಗಿರಲಿ ಅವನು ಪರಿಸ್ಥಿತಿಯನ್ನು ಚನ್ನಾಗಿ ಅರಿತುಕೊಂಡು ತನ್ನ ಉದ್ಯೋಗವನ್ನು ನಡಿಸತಕ್ಕದ್ದು! ಪರಿಸ್ಥಿತಿಯು ವಿಪರೀತವಾಗಿರುವಾಗ ಇಂಥದೊಂದು ಕಾರ್ಯವನ್ನು ಮಾಡಿಯೇ ತೀರುವೆನೆಂಬ ಹೆಮ್ಮೆಗೆ ಯಾವನೂ ಬೀಳತಕ್ಕದ್ದಲ್ಲ!!

ಈ ಭೂಮಂಡಲವನ್ನೇ ಮೆಟ್ಟಿ ನಿಲ್ಲಲು ಸಮರ್ಥನಾದ ಈ ಕಲಿರಾಯನನ್ನೇ ನೋಡಿರಿ! ನಲನನ್ನು ಗತಿಗೆಡಿಸಿ ಧರ್ಮದ ಕಾಲು ಮುರಿದು ಕೆಡಹಬೇಕೆಂಬ ದುಷ್ಕರವಾದ ಪ್ರತಿಜ್ಞೆಯನ್ನು ಮಾಡಿ ಚಮಚಮತ್ಕಾರವಾದ ಯುಕ್ತಿಗಳಿಂದ ನಲನನ್ನು ಪಟ್ಟದಿಂದ ತಳ್ಳಿದೆನು. ಪುಷ್ಕರನಿಗೆ ಪಟ್ಟಗಟ್ಟಿ ಅವನಿಂದ ಧರ್ಮಹಾನಿಯಾಗುವಂಥ ಅನೇಕ ಕೆಲಸಗಳನ್ನು ಮಾಡಿಸಿದೆನು. ತಪಸ್ವಿ ಋಷಿಗಳೆಂಬವರ ಆಟ ಸಾಗದಂತಾಗಬಂದಿರುವದು. ಇಂಥ ಆಯತ್ತವಾದ ಸಮಯದಲ್ಲಿ ನನ್ನ ಬಲವೇ ಅಕಸ್ಮಾತ್ತಾಗಿ ಕುಂದಿದಂತಾಯಿತೇಕೆ? ಶೃಂಖಲಾಬದ್ಧನಾಗಿರುವ ಗಜರಾಜನು ಬಂಧನವನ್ನು ಬಿಡಿಸಿಕೊಳ್ಳಬೇಕೆಂದು ಮಾಡಿದ ಪ್ರಯತ್ನಗಳೆಲ್ಲ ಅವನಿಗೆಯೇ ಅಪಾಯವನ್ನು ಉಂಟುಮಾಡುವಂತೆ ನನ್ನ ಪ್ರಯತ್ನಗಳೇ ನನ್ನನ್ನು ಬಾಧಿಸುತ್ತಿರುವವು. (ಅಡ್ಡಾಡಿ ಚಿಂತಿಸಿ)

ನಲನು ಅಯೋಧ್ಯೆಯಲ್ಲಿ ನಿಂತುಕೊಂಡು ತಾಪಸನಂತೆ ವ್ರತಾಚರಣವನ್ನು ಮಾಡುತ್ತಿರುವನು. ಕಪಟಿಯಾದ ನಾರದನು ಅವನ ಕಿವಿಯಲ್ಲಿ ಏನು ಮಂತ್ರವನ್ನೂದಿದನೋ ಊದಿದನು. ಅವರ ಸಾಮರ್ಥ್ಯದಿಂದಲೇ ನಾನು ಹತವೀರ್ಯನಾದನೇನು? ಇರಬಹುದು! ಈ ಕುಚೋದ್ಯಗಾರರಾದ ಋಷಿಗಳ ಜುಟ್ಟವು ಏನು ಮಾಡಿದರೂ ನನ್ನ ಕೈಗೆ ಸಿಕ್ಕಲೊಲ್ಲದು!!

(ತೆರೆಯಲ್ಲಿ ಯಾರೋ ಹಾಡುತ್ತಾರೆ)

॥ ಕಂದ ॥

ಉಜ್ವಳನು ನಳ ನೃಪಾಲಂ ।
ಸೋಜ್ವಳನವ-ನಗ್ನಿಯಿಂದೆ ಜ್ಯೋತಿಯೊಳ್ ಕೃತಿಯೊಳ್

ಆ ಜ್ವಲನನು ನಲನಾಗದ
ಕಜ್ಜಕದೋ ! ಅನಲನೆಂಬ ನಾಮುವನಾಂತಂ ||

ಕಲಿ:—ಯಾರು ಹಾಡಿದವರು ? ಶಾಲಾಧ್ಯಾಪಕನ ಕುಚೋದ್ಯತನ ವಿದು ! ನಲನ ಹೆಸರು ಕೇಳಿದ ಕೂಡಲೆ ನನ್ನ ಕಿವಿಯಲ್ಲಿ ಸೀಸ ಕಾಯಿಸಿ ಹೊಯ್ದಂತಾಯಿತು. ಈ ಅಧ್ಯಾಪಕನು ಈ ಪದದ ಅರ್ಥವನ್ನು ಒಡೆದು ಹೇಳುವಾಗ ನಲನ ಹೆಸರನ್ನು ಎಷ್ಟಾವರ್ತಿ ತೆಗೆದುಕೊಳ್ಳುವನೋ ಏನೋ ! ಇನ್ನಿಲ್ಲಿ ನಿಲ್ಲಕೂಡದು. (ಮತ್ತೊಂದೆಡೆಗೆ ಹೋಗುತ್ತಾನೆ. ಅಲ್ಲಿ ಯಾರೋ “ ಜಯ ನಲಮಹಾರಾಜ ” ಎಂದು ಕೂಗುತ್ತಾರೆ.) ಅಕೋ ! ಕೇಳಿರಿ ಮತ್ತೆ ನಲನ ಹೆಸರು ಕೇಳಿದಾಕ್ಷಣವೇ ನನ್ನ ಮೈಗೆ ಸುಂಜು ಹಚ್ಚಿದಂತಾಯಿತು. ನಾನಿನ್ನು ಈ ಕೂಗಿನ ಅಳತೆಯ ಆಚೆಗೆ ಹೋಗಲೇಬೇಕು. (ಓಡಿ ತೇಕುತ್ತ ಬಂದು) ಓಡಿ ಸಾಕಾಯಿತು ! ನಿಲ್ಲುವೆನೆಂದರೂ ನನ್ನ ಸ್ವಾಧೀನದಲ್ಲಿಲ್ಲ. ಯಾವದೋ ಅದೃಶ್ಯವಾದ ಶಕ್ತಿಯು ನನ್ನ ಕುತ್ತಿಗೆ ಹಿಡಿದು ನೂಕಿದಂತಾಗು ತ್ತದೆ. (ಮತ್ತೆ “ ಜಯ ನಲಮಹಾರಾಜ ” ಎಂದು ತೆರೆಯಲ್ಲಿ ಕೂಗು) ಯಾರು ಹೀಗೆ ಕೂಗುತ್ತಿರುವರು ಮತ್ತೆ ? ಬಾಲ ಸುಟ್ಟ ಬೆಕ್ಕಿನಂತೆ ಎಷ್ಟು ಪರಿಯಾ ದರೂ ಓಡಲಿ ! (ಓಡಿ ಬಂದು) ಇನ್ನೇನು ಗತಿ ? ದ್ಯೂತಕಾರರ ಅವಸ್ಥೆ ಏನಾಗುವದೋ ! ಮದಿರಾ ಪ್ರಸಾರದ ವ್ಯವಸ್ಥೆ ಏನಾಗುವದೋ ! ಪುಷ್ಕರನ ಸಿಂಹಾಸನವಿನ್ನಾರ ಪಾಲಾಗುವದೋ ಕಾಣೆನು. ನನ್ನ ಫಲಭೋಗವನ್ನುಣ್ಣು ವದೇ ನನಗೆ ಸಾಕುಬೇಕಾಗಿಹೋಯಿತು. ಉಳಿದವರ ಚಿಂತೆಯಿನ್ನೇತಕ್ಕೆ ? ನಾನು ನನ್ನ ಪಲಾಯನವನ್ನು ಸಾಗಿಸಲೇಬೇಕು. ಮತ್ತಿನ್ನಾರಾದರೂ ನಲನ ಹೆಸರು ತೆಗೆದುಕೊಂಡು ಕೂಗಿಗೀಗಾರು ! ಅಕೋ ! ಚಿಂತಿಸುವದೊಂದೇ ತಡ, ಯಾವನೋ ಕೂಗಿದನೇ (“ಜಯ ನಲಮಹಾರಾಜ” ಎಂದು ಯಾರೋ ಮತ್ತೆ ಕೂಗುವರು. ಕಲಿಯು ಮತ್ತೆ ಓಡುತ್ತಾನೆ.)

ಆಯಿತು ! ನನ್ನ ಕಾರಸ್ಥಾನದ ರಚನೆಯೆಲ್ಲ ಕೆಟ್ಟು ಹಾಳಾಗಿ ಹೋಯಿತು ! ನನ್ನ ಪ್ರತಿಷ್ಠೆಯು ಸಮಾಪ್ತಿಯಾಯಿತು !! (ಮತ್ತೆ ತೆರೆ ಯಲ್ಲಿ ಯಾರೋ “ಪುಣ್ಯಶ್ಲೋಕೋ ನಲೋರಾಜ” ಎಂದು ಹಾಡುತ್ತಾರೆ) ಮತ್ತೆ ಅದೇ ಹೆಸರೇ ! ಜನರೇ, ತುಸು ತಡೆಯಿರಿ; ನಾನು ದಿಗಂತರಕ್ಕೆ ಹೊರಟು ಹೋದ ಬಳಿಕ ನೀವು ನಲನ ಹೆಸರು ತೆಗೆದುಕೊಂಡು ಚೀರಾಡಿ ಕೂಗಿ ಗಂಟಲು ಹರಿದುಕೊಳ್ಳಿರಿ. (ಹೋಗುತ್ತಾನೆ.)

## ಐದನೆಯ ಪ್ರವೇಶ

ಸ್ಥಳ:—ನಿಷಧಪುರದಲ್ಲಿ ಪುಷ್ಕರನ ಅರಮನೆ

(ಪುಷ್ಕರನೂ ಅವನ ಪರಿವಾರದವರೂ)

**ಪುಷ್ಕರ:**—ವಾಹ್ವಾ ! ಕುಮುದಾ, ಮರತೆ, ವಾಹ್ವಾ ಸೇನಾಪತಿ ! ಈ ದಿವಸ ನಗರಶೋಭೆಯನ್ನು ಬಹು ಚನ್ನಾಗಿ ಮಾಡಿಸಿರುವಿ. ರಾಜಧಾನಿಯಲ್ಲಿ ಉತ್ಸವಗಳಂತೂ ಅತಿ ಪ್ರೇಕ್ಷಣೀಯವಾಗಿವೆ.

ಧಾಟಿ:—'ವೈಶಾಖ ಮಾಸಿ' ಅಥವಾ 'ಶುಕವಾಣಿ ಕುಸುಮ'

ಅತಿ ಪ್ರೇಕ್ಷಣೀಯ-ವಾಗಿಹುದೀ ನಗರ ಶೋಭೆಯು ।
ಋತುಸ್ನಾತೆ ಪುರದ ದೇವಿ ಭೂ-ಷಣವ ತಳೆದವೊಲ್ ॥
ವನದೇವಿ ತಾನೆ ನಿಂದು ಮಂ-ಟಪವ ರಚಿಸಿದಳ್ ।
ಎನೆ ಬಾಳೆಗಂಬ ಮಾಲೆ ತೋ-ರಣಗಳೆಸೆದವು ॥ ೧ ॥
ನರನಾರಿಯರಿಗೆ ಹರುಷಮಾಗೆ ಮೆರೆಯುತಿರುವರು ।
ಭರದಿಂದೆ ವಾದ್ಯರವಗಳಿರದೆ ತುಂಬಿಕೊಂಡಿವೆ ॥ ೨ ॥
ಮಧುಪಾನ ಮಾಡಿ ಮಾಡಿ ವಿಟರು ವಾರಯುವತಿಯು ।
ಮೃದುಗಾನ ಕೇಳುತಾನಂದದಿ ರಮಿಸುತಿರುವರು ॥ ೩ ।

**ದುಂಡಾಚಾರಿ:**—ಮಹಾರಾಜ, ಒಳ್ಳೇ ಸುರಸವಾಗಿ ವರ್ಣನೆ ಮಾಡಿದಿರಿ. ಈ ವರ್ಷದ ವಿಜಯಾದಶಿಮಿಯ ಮಹೋತ್ಸವಗಳು ಒಳ್ಳೇ ವಿಜೃಂಭಣೆಯಿಂದ ನಡೆದವು.

**ಮರೋದರ:**—ಕುಮುದನ ವ್ಯವಸ್ಥೆ ! ಕೇಳುವದೇನು ?

**ದುಂಡಾಚಾರಿ:**—ಯಾತರ ವ್ಯವಸ್ಥೆ !! ರಾಜಮಂದಿರದಲ್ಲಿಯೇ ಅವ್ಯವಸ್ಥೆಯ ಮಟ್ಟಿ ! ರಂಭೆಯು ಇನ್ನೂ ಬರಲಿಲ್ಲ. ಒಂದು ಪ್ರಹರದಿಂದ ಆ ಉನ್ಮತ್ತೆಯ ಹಾದೀ ನೋಡುತ್ತೇವೆ !

**ಕುಮುದ:**—ಈ ಕುಲಟೆಯರು ಇಂಥ ಆಯತ್ತವಾದ ಪ್ರಸಂಗಗಳಲ್ಲಿ ಬೇಕೆಂದೇ ತಡ ಮಾಡುತ್ತಾರೆ.

**ದುಂಡಾಚಾರಿ:**—ಅವರನ್ನು ಮಣಿಸುವದು ನಿನ್ನಿಂದಾಗಲಿಲ್ಲ ! ಸುಟ್ಟುಹೋಗಲಿ ನಿನ್ನ ಸೇನಾಪತಿತ್ವ !!!

(ಸೇವಕನು ಪ್ರವೇಶಿಸುತ್ತಾನೆ)

**ಸೇವಕ:**—(ಎಲ್ಲರಿಗೂ ಪ್ರಣಾಮ ಮಾಡಿ) ದೇವರೂ, ಹೊರಗೆ ರಂಭಾ ಸಾನಿಯೂ ಮೇಳದವರೂ ಬಂದಿರುತ್ತಾರೆ.

**ಕುಮುದ:**—ಮಹೋದರಾ, ಅವಳನ್ನು ಬೇಗನೆ ಕರಕೊಂಡು ಬಾ !

(ರಂಭೆಯೂ ಮೇಳದವರೂ ಪ್ರವೇಶಿಸುತ್ತಾರೆ)

**ರಂಭಾ:**—ಮಹಾರಾಜರಿಗೆ ಜಯಜಯಕಾರವಿರಲಿ ! (ಎಂದು ಮಂದಸ್ಮಿತೆಯಾಗಿ ಪುಷ್ಕರನಿಗೂ ಅವನ ಅನುಯಾಯಿಗಳಿಗೂ ಕ್ರಮದಿಂದ ಪ್ರಣಾಮ ಮಾಡುತ್ತಾಳೆ.)

**ಕುಮುದ:**—ರಂಭಾ, ಎಷ್ಟು ತಡಮಾಡಬೇಕದು ?

**ದುರೋದರ:**— ತಡವಾದರೆ ಏನಾಯಿತು ? ನೋಡಿರಿ ಇವಳೆಷ್ಟು ಸಿಂಗಾರಾಗಿ ಬಂದಿದ್ದಾಳೆ !!

**ಪುಷ್ಕರ:**—ಸಿಂಗಾರಾಗಿ ಬಂದರೆ ತಡಮಾಡಿದ್ದು ಸುಳ್ಳೇನು? ಇವಳಿಗೆ ತನ್ನ ನೇಪಥ್ಯವನ್ನು ಬೇಗನೆ ಮಾಡಿಕೊಳ್ಳಲಿಕ್ಕೆ ಯಾರು ಬೇಡೆಂದು ಹೇಳಿದ್ದರು ?

**ರಂಭಾ:**— (ಮುಗುಳುನಗೆ ನಕ್ಕು) ಸ್ವಲ್ಪ ತಡವಾಗಬಾರದೇನು ? ಸೇವೆಗೆ ಸಿದ್ಧಳೇ ಇರುವೆನು.

**ಕುಮುದ:**—ಆದದ್ದಾಗಿ ಹೋಯಿತು ! ಇನ್ನಾದರೂ ಬೇಗನೆ ಗೆಜ್ಜೇ ಕಟ್ಟು.

**ಪುಷ್ಕರ:**—ರಂಭಾ, ಈ ದಿವಸ ನಿನ್ನನ್ನು ಬೆಳತನಕ ಒದರಿಸುತ್ತೇವೆ. ತಡಮಾಡಿ ಬಂದಿದ್ದಕ್ಕೆ ಇದೇ ಶಿಕ್ಷೆ !

**ರಂಭಾ:**— ಆಗಲಿ ! ನನ್ನನ್ನು ದಣಿಸಬೇಕೆಂದವರೆಲ್ಲರೂ ತಾವೇ ಸೋತು ಹೋಗಿದ್ದಾರೆ.

(ನೃತ್ಯಕ್ಕೆ ಪ್ರಾರಂಭವಾಗುತ್ತದೆ)

**ಧಾಟಿ:**—' ಮೋಹಿನೀಕೆ ಲಾಗೆ ಹಾರ ಸಾವಲಿಯಾಕೆ ಬನ್ಸೀ '

ಮೋಹನಾಂಗಾ ಬಾರೋ ಬೇಗ । ಮಾರನ ಬಾಧೆ ಬಿಡಿಸೊ ‖ಪಲ್ಲ‖  
ಪ್ರೇಮಭರದೊಳಾಲಿಂಗಿಸಿ ಕಾಂತಾ ವಿಲಾಸಮಂ ತೋರಿ ‖  
ಕಾಮಾರ್ತೆಗೆ ನೀ ಶಾಂತಿಯ ನೀಡೊ ನಾಥಾ ಪುಷ್ಕರರಾಜಾ ‖ ೨ ‖

**ಪುಷ್ಕರ:**—ವಃವ್ಹಾ ! ವಃವ್ಹಾ !! ರಂಭಾಸಾನಿ, ಒಳ್ಳೇ ಇಂಪಾಗಿ ಹಾಡಿ ನರ್ತಿಸಿದಿ. (ಎಂದು ಉದ್ಗಾರತೆಗೆದು ಕೊರಳಲ್ಲಿಯ ಮುತ್ತಿನ ಹಾರವನ್ನು ರಂಭೆಯ ಮೇಲೆ ಚಲ್ಲುತ್ತಾನೆ.)

**ರಂಭಾ:**— (ಕಂಠಿಯನ್ನು ಹಾಕಿಕೊಂಡು ಸಂತೋಷದಿಂದ ನಗುತ್ತ ಪುಷ್ಕರನಿಗೆ ಪ್ರಣಾಮಮಾಡಿ) ಹಾಡು ಮನಸ್ಸಿಗೆ ಬಂದಿತೇನು ?

**ದುಂಡಾಚಾರಿ:**—ರಂಭಾ, ಮುತ್ತಿನ ಕಂಠಿ ನಿನ್ನ ಮನಸ್ಸಿಗೆ ಬಂದಿತೇನು ? ಮಹಾರಾಜರನ್ನು ಕಂಡಿರುವಿ ! ಮತ್ತೇನು !!!

**ಪುಷ್ಕರ:**—ರಂಭಾ, ಇದೇ ಪದವನ್ನು ಮತ್ತೆ ಹಾಡಿ ನರ್ತಿಸು.

**ರಂಭಾ:**—(ಅದೇ ಪದವನ್ನು ಮತ್ತೆ ಹಾಡುತ್ತ ನರ್ತಿಸುತ್ತಾಳೆ)

(ಅಷ್ಟರಲ್ಲಿ ಬಾಗಿಲನ್ನು ನೂಕಿ ಧೀರೇಂದ್ರಸಿಂಹನೂ ಸೈನಿಕರೂ ಶಸ್ತ್ರಪಾಣಿಗಳಾಗಿ ಆರ್ಭಟಿಯಿಂದ ಪ್ರವೇಶಿಸುತ್ತಾರೆ)

**ಪುಷ್ಕರ:**—(ಚಕಿತನಾಗಿ) ಏನು ಗದ್ದಲವಿದು ?

**ಕುಮುದ:**— ಯಾರು ನೀವು? ಯಾರ ಅಪ್ಪಣೆಯಿಂದ ಇಲ್ಲಿಗೆ ಬಂದಿರಿ ?

**ಧೀರೇಂದ್ರ:**—ಯಾರು ಗೊತ್ತಿಲ್ಲವೇನು ? ನಿಮ್ಮೆಲ್ಲರಿಗೆ ಯುವರಾಜನಾದ ಧೀರೇಂದ್ರಸಿಂಹನ ಪರಿಚಯವು ನಿಮಗಿಲ್ಲವೆ ?

**ಪುಷ್ಕರ:**— ಧೀರೇಂದ್ರ, ಯಾರ ಅಪ್ಪಣೆಯಿಂದ ನೀನಿಲ್ಲಿಗೆ ಬಂದಿ ? ಹೊರಗೆ ನಡೆ !

**ಧೀರೇಂದ್ರ:**—ಪುಷ್ಕರರಾಜ, ನಲಮಹಾರಾಜರ ಅಪ್ಪಣೆಯ ಮೇರೆಗೆ ತಮ್ಮನ್ನು ಕಾರಾಗೃಹದ ಸುಖಾನುಭೋಗಕ್ಕೆ ಕರಕೊಂಡು ಹೋಗಲಿಕ್ಕೆ ಬಂದಿದ್ದೇನೆ. ದಯಮಾಡಬೇಕು !! ಶತ್ರುಜಿತ್‌ಸಿಂಹ, ಈ ಪುಷ್ಕರರಾಜರನ್ನು ಬಂದಿಗಳನ್ನಾಗಿ ಮಾಡಿರಿ. ಸೈನಿಕರೆ, ಉಳಿದವರನ್ನು ಹಗ್ಗಗಳಿಂದ ಬಿಗಿದು ಕಟ್ಟಿರಿ.

**ಕುಮುದ:**—ತಡೆ ಶತ್ರುಜಿತ್ ! ನೀನು ಪುಷ್ಕರರಾಜರ ಮೈಮುಟ್ಟಿದಿಯಾದರೆ ನಿನ್ನ ಕೈಗಳನ್ನೇ ಕಡಿಸಿ ಚಲ್ಲುವೆನು. ನಾನು ಈ ರಾಜ್ಯದ ಸೇನಾಪತಿಯು ಗೊತ್ತಿರಲಿ !!

**ಧೀರೇಂದ್ರ**:—(ಸೈನಿಕನನ್ನು ಕುರಿತು) ಪ್ರತಾಪ, ಮೊದಲು ಈ ಸೇನಾಪತಿಗಳ ಪಾದಪೂಜೆಯನ್ನು ಚನ್ನಾಗಿ ಮಾಡಿ ಬಳಿಕ ಮರ್ಯಾದೆಯಿಂದ ಅವರನ್ನು ಹಗ್ಗಗಳಿಂದ ಕಟ್ಟಿರಿ! (ಸೈನಿಕರು ಎಲ್ಲರನ್ನು ಕಟ್ಟಿ ಜಗ್ಗಿಕೊಂಡು ಹೋಗುತ್ತಾರೆ)

(ತೆರೆ)

---

## ಆರನೆಯ ಪ್ರವೇಶ

ಸ್ಥಳ:—ಕುಂಡಿನಪುರದ ಪ್ರಮದವನವು

(ಶೃಂಗಾರಿಕಾ, ರಂಜನೀ ಎಂಬ ದಾಸಿಯರು)

**ರಂಜನೀ:**—ಶೃಂಗಾರಿಕೆ, ಎಷ್ಟೊಂದು ಹೂಗಳನ್ನು ಕೊಯ್ದಿರುವಿ ? ಯಾತಕ್ಕೆ ಬೇಕು ಇಷ್ಟು ?

**ಶೃಂಗಾರಿಕಾ:**—ರಂಜನೀ, ಒಳ್ಳೇ ಸಮಯಕ್ಕೆ ಬಂದಿ ! ಬಾ, ಮಾಲೆಗಳನ್ನು ಕಟ್ಟೋಣ.

**ರಂಜನೀ:**—ಇಷ್ಟು ಹೂಗಳ ಮಾಲೆಗಳೇತಕ್ಕೆ ?

**ಶೃಂಗಾರಿಕಾ:**—ಏತಕ್ಕೆಂದರೆ ! ನಲಮಹಾರಾಜರು ಬಂದಿರುವರು. ದಮಯಂತೀದೇವಿಯರ ಶೃಂಗಾರಮಂದಿರವನ್ನು ಅಲಂಕರಿಸಬೇಕಾಗಿದೆ.

**ರಂಜನೀ:**—ನಲಮಹಾರಾಜರು ಬಂದಿರುವರೆ ! ನಾನು ಕೇಳಿಯೇ ಇಲ್ಲ. ಯಾವಾಗ ಬಂದರು ?

**ಶೃಂಗಾರಿಕಾ:**—ಅವರು ಈ ರಾಜಧಾನಿಗೆ ನಿನ್ನೆಯೇ ಬಂದರಂತೆ. ಅರಮನೆಗೆ ಇಂದು ಬಂದರು.

**ರಂಜನೀ:**—ನಿನ್ನೆ ಯಾಕೆ ಅರಮನೆಗೆ ಬರಲಿಲ್ಲ ?

**ಶೃಂಗಾರಿಕಾ:**—ಅವರು ವೇಷಾಂತರವನ್ನು ತಾಳಿ ಬಂದಿದ್ದರಾದ್ದರಿಂದ ನಿನ್ನೆ ಅರಮನೆಗೆ ಬರಲಿಲ್ಲ. ನಿನ್ನೇ ದಿನ ಕುದುರೆಗಳನ್ನು ಓಡಾಡಿಸುವವರಲ್ಲಿ ಎಲ್ಲರಿಗೂ ಮುಂದಾಗಿ ಬಂದವರೇ ನಲಮಹಾರಾಜರು.

**ರಂಜನೀ:**—ಅವರು ನಲಮಹಾರಾಜರೆ ?!!! ಕಪ್ಪುಬಣ್ಣದ ಸೇವಕನೊಬ್ಬನು ಎಲ್ಲರಿಗೂ ಮುಂದಾಗಿ ಬಂದನಂತೆ. ಬಂಗಾರದಂತೆ ತಳತಳನೆ ಹೊಳೆಯುವ ನಲಮಹಾರಾಜರೆಲ್ಲಿ ಆ ಕಾಡಿಗೆಯ ಗೊಂಬೆಯಂಥ ಮನುಷ್ಯನೆಲ್ಲಿ ?

**ಶೃಂಗಾರಿಕಾ:**—ಆ ಕಪ್ಪು ಮನುಷ್ಯನು ಕುದುರೆಯನ್ನು ಓಡಿಸುವಾಗ ತೋರಿಸಿದ ಜಾಣತನವು ನಲಮಹಾರಾಜರಿಗಲ್ಲದೆ ಮತ್ತೊಬ್ಬರಿಗೆ ಬಾರದು. ಆವನ ರೂಪ ವೈಕಟ್ಟುಗಳು ನಲರಾಜರ ರೂಪ ವೈಕಟ್ಟು

ಗಳಂತೆಯೇ ಇರುವವೆಂಬ ವರ್ತಮಾನವನ್ನು ಕೇಳಿ ದಮಯಂತೀ ಮಹಾರಾಣಿಯವರು ಆತನನ್ನು ಪರೀಕ್ಷಿಸುವದಕ್ಕಾಗಿ ನನ್ನನ್ನು ಆತನ ಬಳಿಗೆ ಕಳಿಸಿದರು.

**ರಂಜನೀ:**—ನೀನು ಹೋಗಿ ಏನೇನು ಪರೀಕ್ಷೆ ಮಾಡಿದೆ?

**ಶೃಂಗಾರಿಕಾ:**—ನಲದಮಯಂತಿಯರ ಸ್ವಯಂವರವು ಮುಗಿದ ಬಳಿಕ ಇಂದ್ರಾದಿ ದೇವತೆಗಳು ನಲಮಹಾರಾಜರಿಗೆ ಕೆಲವು ವರಗಳನ್ನು ಕೊಟ್ಟರು. ಆ ವರಗಳ ಮಹಿಮೆಯಿಂದ ನಲಮಹಾರಾಜರಿಗೆ ಬಾಡಿದ ಹೂಗಳನ್ನು ಹೊಸ ಹೂಗಳಂತೆ ಮಾಡಲಿಕ್ಕೆ ಬರುತ್ತದೆ; ಒಲೆಗೆ ಬೆಂಕಿಯನ್ನಿಕ್ಕದೆ ಹಾಗೆಯೇ ಬಾಯಿಯಿಂದ ಊದಿ ಅವರು ಉರಿ ಮಾಡಬಲ್ಲರು. ಕಗ್ಗ ಮುಗ್ಗ ಸಾಹಿತ್ಯವನ್ನು ಕೊಟ್ಟರೂ ಅವರು ರುಚಿಕರವಾದ ಅಡಿಗೆ ಮಾಡುತ್ತಾರೆ.

**ರಂಜನೀ:**—ಈ ಚಾತುರ್ಯವೆಲ್ಲ ಆ ಕಪ್ಪು ಮನುಷ್ಯನಲ್ಲಿರುವದನ್ನು ನೀನು ಪರೀಕ್ಷಿಸಿದಿ !

**ಶೃಂಗಾರಿಕಾ:**—ಅಹುದು. ಆತನ ಮುಖವನ್ನು ದಿಟ್ಟಿಸಿ ನೋಡಲಾಗಿ ಅದು ನಲರಾಜರ ಮುಖದಂತೆಯೇ ಕಂಡಿತು.

**ರಂಜನೀ:**—ನೀನು ಒಳ್ಳೇ ಚತುರೆ !!!

**ಶೃಂಗಾರಿಕಾ:**—ಬಳಿಕ ನಾನು ಯುವರಾಜ ಇಂದ್ರಸೇನರನ್ನು ಅವರ ಬಳಿಗೆ ಕರಕೊಂಡು ಹೋದೆನು. ಯುವರಾಜರನ್ನು ಕಂಡಕೂಡಲೆ ನಲಮಹಾರಾಜರು ತಮ್ಮ ವೇಷಾಂತರವನ್ನು ಮರೆತು ಪುತ್ರವಾತ್ಸಲ್ಯದಿಂದ ಅವರನ್ನು ತಬ್ಬಿಕೊಂಡು "ವತ್ಸಾ ಇಂದ್ರಸೇನಾ. ನನ್ನ ಗುರುತು ಹತ್ತಲಿಲ್ಲವೇ ? " ಎಂದು ಕೇಳಿದರು.

**ರಂಜನೀ:**—ಮಕ್ಕಳ ಮೇಲಿನ ಅಂತಃಕರಣವೇ ಬೇರೆ !!

**ಶೃಂಗಾರಿಕಾ:**—ಯುವರಾಜರು ಮಹಾರಾಜರ ಗುರುತು ಕಾಣದೆ ಬೆರಗಾಗಿ ನಿಂತಿರಲು ನಲಮಹಾರಾಜರು ತಮ್ಮ ಬಳಿಯಲ್ಲಿರುವ ಶೆಲ್ಲೆಯನ್ನು ಮೈಮೇಲೆ ಹಾಕಿಕೊಂಡರು. ಚಮತ್ಕಾರ ನೋಡು ! ಮೋಡದೊಳಗಿನ ಚಂದ್ರಮನು ಹೊರಗೆ ಬಂದಂತೆ ನಲಮಹಾರಾಜರ ದಿವ್ಯವಾದ ರೂಪವೂ ಅವರ ಹೊಂಬಣ್ಣದ ಕಾಂತಿಯೂ ಜಗ್ಗನೆ ಹೊಳೆದು ತೋರಿದವು.

**ರಂಜನೀ:**—(ಬಾಯಿಮೇಲೆ ಕೈಯಿಟ್ಟುಕೊಂಡು) ಏನು ಚಮತ್ಕಾರವದು !!! ಆ ಶಿಲ್ಪೆಯಲ್ಲಿ ಮಂತ್ರಸಾಮರ್ಥ್ಯವಿರಬಹುದಲ್ಲೆ ?

**ಶೃಂಗಾರಿಕಾ:**—ಅಹುದು ರಂಜನೀ, ಹೊತ್ತಾಯಿತಿನ್ನು ನಡೆ ಅರಮನೆಗೆ ಹೋಗೋಣ. ಕೆಲಸ ತುಂಬಿದೆ !

**ರಂಜನೀ:**—ನಡೆ.

(ಹೋಗುತ್ತಾರೆ)

——

## ಏಳನೆಯ ಪ್ರವೇಶ

ಸ್ಥಳ:—ಕುಂಡಿನಪುರದ ರಾಜಮಂದಿರ

(ರಾಜನೂ ದಮಯಂತಿಯೂ)

(ನಲರಾಜನು ಪ್ರವೇಶಿಸಿ ದಮಯಂತಿಯನ್ನು ಆಲಿಂಗಿಸುತ್ತಾನೆ)

ರಾಗ:—ಜೀವನಪುರಿ,

ಧಾಟಿ:—' ಹಮರಯ್ಯ ರಾತ ಬಿರಹನಕೆ '

**ರಾಜಾ:—**

ಸುರಸೌಖ್ಯವೇನೆ ಧರೆಯೊಳಗೆ ಕಾಂತೆ ॥
ಹರುಷದಿ ನಿನ್ನನೀಗ ಚುಂಬಿಸಿದುದು ॥ ಪಲ್ಲ ॥
ಘೋರವಾದ ವನವಾಸದ ಕ್ಲೇಶವು
ಇರದೆ ಪೋದುದೆ ಪ್ರೇಮದರಸಿ ॥ ೧ ॥

**ದಮಯಂತಿ:**—ಇಂದಿಗೆ ನಾನು ಕೃತಾರ್ಥಳಾದೆನು.

ರಾಗ—ಭೈರವಿ. ಧಾಟಿ:—' ಗುಜರಿ ಗವ್ಹಾರ ನಾರ '

ಪಿರಿದೀ ಸಖಾನುಭೂತಿ ॥
ಮೇರೆ ಮೀರಿತೇಂ ಪ್ರೇಮವಾರ್ಧಿ ॥ ಪಲ್ಲ ॥
ಪತಿ-ಪಾದಾಂಬುಜಗಳನಾಂ ಬಿಡದೆ ಭಜಿಸುವಂತೆ ॥
ಪ್ರೀತಿಯಿಂದೆ, ನೀಡೊ ರಮೇಶಾ ॥ ೧ ॥

**ರಾಜಾ:**—ಪ್ರಿಯೆ, ನನ್ನ ಅವಿಚಾರದ ಮೂಲಕವಾಗಿ ನಿನಗೆ ಅನೇಕವಾದ ದುಃಖಗಳನ್ನು ಅನುಭವಿಸಬೇಕಾಯಿತಲ್ಲೆ ?

**ದಮಯಂತಿ:**—ಆರ್ಯಪುತ್ರರು ಅನುಭವಿಸಿದ ದುಃಖಗಳ ಮುಂದೆ ನನ್ನ ದುಃಖಗಳು ಏನೂ ಅಲ್ಲ. ಆದರೆ ಇಂಥ ಸುಸಮಯದಲ್ಲಿ ಹಿಂದಾದ ದುಃಖಗಳನ್ನು ನೆನೆದು ಮನಸ್ಸಿಗೆ ಸಂತಾಪಮಾಡಿಕೊಳ್ಳುವದೇಕೆ ?

**ರಾಜಾ:—** ರಾಗ:—ತೋಡಿ. ತ್ರಿತಾಲ.

ನಿರುಪಮೆ ನೀನೇ ದೇವಿ ಮೋಹಿನಿಯೇ ॥ ಪಲ್ಲ ॥
ನೂರು ಜನುಮದಲಿ ಸುಕೃತವ ಮಾಡಿ ಪ್ರೀಯೆ ತವ ಪತಿಯಾದೆ ॥೧॥

**ದಮಯಂತಿ:**— ಪ್ರಿಯರೆ, ಇಷ್ಟು ಸ್ತುತಿಗೆ ನಾನು ಪಾತ್ರಳಿಲ್ಲ. ನನ್ನಲ್ಲಿ ಏನಾದರೂ ಗುಣಾಂಶವಿದ್ದದ್ದಾದರೆ ಅದು ಈ ಪುಣ್ಯಾಕರವಾದ ಪಾದಗಳ ಸಂಶ್ರಯದ ಫಲವೇ !

**ರಾಜಾ:**—ಸಾಧ್ವಿ, ನಿನ್ನಂಥ ಸುಚರಿತೆಯ ಸಂಯೋಗದಿಂದಲೇ ನಾನು ವಿಪತ್ತುಗಳನ್ನು ಸಹಿಸಲು ಸಮರ್ಥನಾದೆನು.

**ದಮಯಂತಿ:**—(ನಕ್ಕು) ಹಾಗಲ್ಲ ! ತಮ್ಮಂಥ ಪೃಥ್ವೀಪಾಲಕರ ಆಧಾರದಿಂದಲೇ ಈ ಭೂದೇವಿಯು ಸಕಲ ಭಾರಗಳನ್ನು ಸಹಿಸಲು ಸಮರ್ಥಳಾಗಿರುತ್ತಾಳೆ.

ರಾಗ:—ಜಯಜಯವಂತೀ. ಧಾಟಿ:—'ಲರಿಯಾ ಮಾಯಿಸಾ'

**ರಾಜಾ:**—

ದಯಿತೆ ತಾಲಿಸೆ ಲಾಮೊ ।
ಶ್ರೇಯವಿಂತಾದುದೆ ನೀನಿರೆ ವಿಮಲೆ ॥ ಪಲ್ಲ ॥
ಕಾಡುಕಣೇ ! ಗಂಗಾ ತಟದಿ, ಕ್ಷೇತ್ರವೆನಿಸುವದೆ ॥ ೧ ॥

**ದಮಯಂತಿ:**— (ಕಿಟಕಿಯ ಕಡೆಗೆ ನೋಡಿ) ಅಪ್ಪಯ್ಯಾ! ಅಲ್ಲಿ ನೋಡಿರಿ ! ಮಾತುಮಾತಾಡುವಷ್ಟರಲ್ಲಿ ಬೆಳಗೇ ಆಯಿತು. ಈ ಪ್ರಭಾತ ಶೋಭೆಯನ್ನು ನೋಡಿದಿರಾ !

ಧಾಟಿ:—'ಪುಷ್ಪಪರಾಗ'

ದಿನಕರರಾಜ ನವೋದಿತ-ನೀಗಲೆ
ಬಹನೆಂದು ಮಹೋತ್ಸವವಾಯಿತೇಂ ॥
ಇನಿದೆನೆ, ರಾಜನ ಬಂದಿಗಳಾಗಿ
ಪಾಡುತಿಹವು ಖಗ ಜಾತಿಗಳ್ ॥ ಪಲ್ಲ ॥
ವನತರು ರಾಜಿಯು ತೋರಣಮಾದುದು
ತಪನ-ನೃಪನ ಸ್ವಾಗತಕೆ ॥
ಮನದಿ ಹರುಷ ಮಿಗೆ ವನದ ದೇವಿಯು
ಕುಸುಮಗಳಾರುತಿ ತಂದಿಹಳ್ ॥ ೧ ॥

**ರಾಜಾ:**— ಸರಿ ಸರಿ! ಮನೋರಮೆ, ಈ ಚಮತ್ಕಾರ ನೋಡಿದಿಯಾ ? ಚಂದ್ರಮನೊಡನೆ ರಮಿಸುತ್ತಿರುವ ರಜನೀದೇವಿಯು

ಅರುಣೋದಯವಾದದ್ದು ನೋಡಿ ಹೇಗೆ ಮೆಲ್ಲನೆ ಸ್ಥಲಾಂತರವನ್ನು ಮಾಡಿದಳು.

ಧಾಟಿ:—' ಪ್ರಿಯೆ ಪಹಾ ರಾತ್ರೀಚಾ '

ವಿಲಾಸಿನೀಯಾಮಿನಿ ತಾಂ ನಾಚಿ ನಡೆದಳೇನೆ ಉದಯಕಾಲದಿ ॥ ಪಲ್ಲ ॥
ಲೋಲೆ ಬಾರೆ ಬೇಗ ಸುರತ ಲೀಲೆಗೀಗಲೆನುತ ಪ್ರಿಯನು
ಚಾಲೆಯನೇಂ ಶಯನಕೆಳೆಯೆ ಶೀಲೆ ನೋಡಿ ಅರುಣನಂ ॥ ೧ ।

(ತೆರೆ)

---

## ಎಂಟನೆಯ ಪ್ರವೇಶ

ಸ್ಥಳ:—ನಿಷಧ ದೇಶದ ರಾಜಧಾನಿ.

(ರಾಜಾ, ದಮಯಂತೀ, ನಾರದ, ಪ್ರಧಾನರು)

**ರಾಜಾ:**—ನಾರದ ಮಹಾಮುನೀಶ್ವರರೇ, ತಮ್ಮ ಕೃಪಾಪ್ರಸಾದದಿಂದಲೇ ನಾನು ಈ ಸುದಿನವನ್ನು ಕಂಡೆನು. ಈ ಸಿಂಹಾಸನವನ್ನೇರಲು ನನಗೆ ಮುನೀಶ್ವರರ ಅನುಜ್ಞೆ ಇರಬೇಕು. (ನಾರದರಿಗೆ ವಂದಿಸುತ್ತಾನೆ)

**ನಾರದ:**—ರಾಜನ್, ನೀನೀ ಸಾಮ್ರಾಜ್ಯವನ್ನು ಅವ್ಯಾಹತವಾಗಿ ಆಳಿ ಪ್ರಜಾಜನರಿಗೆ ಅಖಂಡವಾದ ಸುಖವನ್ನು ಕೊಡುವವನಾಗು.

**ರಾಜಾ:**—ಮುನೀಂದ್ರರಿಂದ ಅನುಗ್ರಹೀತನಾದೆನು.

**ಅಮಾತ್ಯ:**—ದೇವರ್ಷಿಗಳೆ, ಮಹಾರಾಜರೆ, ಪ್ರಜಾಜನರೆ, ದಯಮಾಡಿ ಚಿತ್ತೈಸಬೇಕು: ಮಹಾರಾಜರು ನಮ್ಮೆಲ್ಲರ ಹಿತವನ್ನು ಅನುಲಕ್ಷಿಸಿಯೇ ಈ ಸಾಮ್ರಾಜ್ಯದ ಪರಿಪಾಲನವನ್ನು ಮಾಡುತ್ತೇವೆಂದು ಪ್ರತಿಜ್ಞೆ ಮಾಡಿ ಈ ಸಿಂಹಾಸನವನ್ನು ಅಲಂಕರಿಸುವವರಾಗಿದ್ದಾರೆ. ಪೂರ್ವದಲ್ಲಾದರೂ ನಮ್ಮ ಹಿತವೇ ತಮ್ಮ ಹಿತವೆಂದೂ ನೆನೆದು ಪ್ರಭುಗಳು ನಮ್ಮನ್ನು ಪ್ರೇಮದಿಂದ ಪಾಲಿಸುತ್ತಿದ್ದರೆಂಬುದನ್ನು ನಾನು ನಿಮಗೆ ಹೇಳಬೇಕಾಗಿಲ್ಲ.

**ನಾರದ:**—ಸಾಧು ! ಸಾಧು !!

**ಅಮಾತ್ಯ:**—(ತಲೆಬಾಗಿ ನಾರದರಿಗೆ ವಂದಿಸಿ) ಸ್ವಸುಖದಲ್ಲಿ ನಮ್ಮ ಮಹಾರಾಜರಿಗೆ ಎಂದೂ ಅಭಿಲಾಷೆಯಿರಲಿಲ್ಲ. ಸತ್ಯವ್ರತರಾದ ರಾಜರಿಗೆ ಸ್ವಾರ್ಥವೆಲ್ಲಿ? ಪ್ರಜಾರಂಜನವೇ ಅವರ ಸ್ವಾರ್ಥವು. ಧೀರೇಂದ್ರಸಿಂಹ, ಮಹಾರಾಜರಿಗೆ ಹಸ್ತಾವಲಂಬನವನ್ನಿತ್ತು ಸಿಂಹಾಸನಕ್ಕೆ ಕರೆದೊಯ್ಯಿರಿ !

**ರಾಜಾ:**—ನಾರದ ಮಹಾಮುನೀಶ್ವರರೆ, ಪ್ರಧಾನರೆ, ಮಕ್ಕಳಂತಿರುವ ನನ್ನ ಪ್ರಜರೆ, ಒಳಗಡೆ ನನ್ನಿಂದಾದ ಪ್ರಮಾದಗಳ ಮೂಲಕ ನನ್ನ ಪ್ರಜಾಜನಕ್ಕೆ ಬಗೆಬಗೆಯ ದುಃಖಗಳನ್ನು ಅನುಭವಿಸಬೇಕಾಯಿತು. ನಾನಾದರೂ ಅದರ ಪ್ರಾಯಶ್ಚಿತ್ತವನ್ನು ಚನ್ನಾಗಿ ಭೋಗಿಸಿದೆನು. ಆದದ್ದು ಆಗಿಹೋಯಿತು. ನೀವೆಲ್ಲರೂ ರಾಜನಿಷ್ಠರಾಗಿ ಪ್ರಯತ್ನಮಾಡಿದ್ದರಿಂದಲೇ ಭಗವಂತನು ಪ್ರೀತನಾಗಿ ಈ ಸುಯೋಗವನ್ನು ಒದಗಿಸಿಕೊಟ್ಟಿರುವನು. ಆ ಪರ

ಮಾತ್ಮನನ್ನು ಅನನ್ಯಭಾವದಿಂದ ಸ್ಮರಿಸಿ ನಾನೀ ಸಿಂಹಾಸನವನ್ನು ಏರುವೆನು.
(ಜಯ ನಲಮಹಾರಾಜ ಎಂದು ಎಲ್ಲರೂ ಜಯಘೋಷ ಮಾಡುತ್ತಾರೆ)

ಧಾಟಿ:—'ದೆದೆದೆ ದೇರೆ ಪ್ರಭೋ'

ನಾರದರೇ ಸಾಕ್ಷಿಯಾಗಿ ಶಪಥಗೈವೆನಿಂತು ॥ ಪಲ್ಲ ॥
ಪ್ರಜರ ಹಿತವೆ ನನ್ನ ಹಿತವು ಪ್ರಜರ ಸುಖದಿ ಸುಖಿಪೆ ನಾನು ॥
ರಾಜಪದವು ನನಗಾದರೆ ಪ್ರಜರ ಧನವು ರಾಜ್ಯಂ ॥ ೧ ॥

**ಸೇನಾಪತಿ:**— ಮಹನೀಯರೆ, ನಮ್ಮ ಮಹಾರಾಜರು ಮಾಡಿದ ಉದಾರತರವಾದ ಪ್ರತಿಜ್ಞೆಯನ್ನು ಕೇಳಿದಿರಾ ? ಕೃತಜ್ಞತೆಯಿಂದ ನನ್ನ ಶಿರ ಬಿಗಿದು ಆನಂದಾಶ್ರುಗಳು ಒತ್ತಿಬಂದಿದ್ದರಿಂದ ನಾನು ಹೆಚ್ಚಿಗೆ ಮಾತಾಡಲರಿಯೆನು. (ರಾಜನಿಗೆ ಹಸ್ತಾವಲಂಬವನ್ನಿತ್ತು ಸಿಂಹಾಸನದ ಬಳಿಗೆ ಕರೆದೊಯ್ಯುತ್ತಾನೆ)

(ತೆರೆಯಲ್ಲಿ ವೈತಾಲಿಕರೀರ್ವರು ಹಾಡುತ್ತಾರೆ)

ರಾಜಮಂಡಲೇಶ, ಚಿರಕಾಲವೀ ಧರೆಯ ನೀಂ ।
ಮೂಜಗವು ಪಾಡುವೊಲ್ ಪರಿಪಾಲಿಸೈ ನಯದಿ ॥ ಪ ॥
ಲೋಕದಾರ್ಕ್ಯಕೆಯಲಿ ಜರಿವೆ ನೀಂ ನಿಜಸುಖವ ।
ಶಾಖಿ ತಾಪವ ತಳೆದು ನೆಳಲನೀಯುವೆ ಜಗಕೆ ॥ ೧ ॥
ತಾವು ಬಾಂಧವರಿರದೆ ನೆರವಗೈ ಧನವಿರಲು ।
ದೇವ ನೀಂ ನಿಜನಾದ ಬಂಧುವೈ ನಮಗೆಲ್ಲ ॥ ೨ ॥

(ರಾಜನು ಸಿಂಹಾಸನವನ್ನು ಅಲಂಕರಿಸುತ್ತಾನೆ.)

**ನಾರದ:**—ನಲರಾಜ, ನೀನು ಸಿಂಹಾಸನಾರೂಢನಾದದ್ದು ಕಂಡು ನನಗೆ ಪರಮ ಸಂತೋಷವಾಯಿತು ! ಕಲಿಯ ನಿಗ್ರಹವು ನಿನ್ನಿಂದ ಆಗಬೇಕಾಗಿತ್ತೆಂದೇ ದೇವರು ನಿನ್ನ ಮೇಲೆ ವಿಪತ್ತು ತಂದಂತೆ ಮಾಡಿ ನಿನ್ನಿಂದ ವ್ರತಾಚರಣವನ್ನು ಮಾಡಿಸಿದರು. ಆ ವ್ರತದ ಪ್ರಭಾವದಿಂದ ಕಲಿಯು ಹತವೀರ್ಯನಾಗಿ ಹೋದನು. ಇನ್ನುಮೇಲೆ ನಿನ್ನ ನಾಮೋಚ್ಚರಣವನ್ನಾಗಲಿ ಈ ದಮಯಂತೀದೇವಿಯ ಪವಿತ್ರವಾದ ಹೆಸರನ್ನಾಗಲಿ ತೆಗೆದುಕೊಂಡವರಿಗೆ ಕಲಿಯ ಬಾಧೆ ತಪ್ಪುವದು. ಕಲಿಯನ್ನು ನಿಗ್ರಹಿಸುವೆನೆಂದು ನೀನು ಮಾಡಿದ ಪ್ರತಿಜ್ಞೆಯಂತೂ ಸಂಪೂರ್ಣವಾಗಿ ಕೊನೆಗಂಡಿತು. ರಾಜಾ, ಮತ್ತಿನ್ನಾವದಾದರೂ ಇಚ್ಛೆ ನಿನಗಿರುವದೇನು ?

**ರಾಜಾ:**—ಭಗವನ್, ತಮ್ಮ ಅನುಗ್ರಹದಿಂದ ಸಕಲವಾದ ಪುರುಷಾರ್ಥಗಳು ಕೈಗೂಡಿವೆ. ಆದರೂ ದೇವರ್ಷಿಗಳು ಪ್ರಸನ್ನರಾಗಿರಲು ಈ ಭರತ ವಾಕ್ಯವು ಅಮೋಘವಾದದ್ದಾಗಲಿ !

॥ ಮತ್ತೇಭವಿಕ್ರೀಡಿತವೃತ್ತ ॥

ಧರಣೀಪಾಲರು ಪ್ರೇಮದಿಂ ಪ್ರಜಗಳಂ ಕಾಪಾಡಲಿ-ನ್ಯೂರ್ವಿಯೊಳ್ ।
ಹರುಷಂ ತುಂಬಲಿ, ರಾಜನಿಷ್ಠೆ ಜನರೊಳ್ ತಾಂ ಪೆರ್ಚಲಿನ್ನಾವಗಂ ॥
ಮೆರೆದುಂ ತೋರಲಿ ವೃಕ್ಷಗಳ್ ಫಲಗಳಿಂ ಸಸ್ಯಾಲಿಯಿಂ ಕ್ಷೇತ್ರಗಳ್ ।
ನಿರುತಂ ಪುಷ್ಕರಿಣೀ ಸಮೂಹಮುಮಲಂ ಮತ್ತೇಭವಿಕ್ರೀಡಿತಂ ॥೧॥

## ॥ ಈಶಸ್ತವನ ॥

ಧಾಟಿ:—' ಜಯತು ಜಯ ಸುಸರಿತೆ ಜಗದಖಿಳ '

ರಾಗ:—ಭೂಪ

ಪರಮ ಮಂಗಲಧಾಮ ಸುರನಮಿತ ಮಾಧವಾ ॥ ಪ ॥
ಕಾಮಿತವ ನಮಗೀವ ಭೂಮಿ ಜಲ ವ್ಯೋಮಗಳ ।
ವಿಮಲ ರವಿ-ಹಿಮಕರರ ಸ್ವಾಮಿ ನೀಂ ಸೃಜಿಸಿದ್ದೆ ॥೧॥
ಜ್ಞಾನ ಬಲ ಧೈರ್ಯ ಚಾತುರ್ಯಗಳ-ನೀಯುತಲಿ ।
ಮಾನವಗೆ ಕ್ಷೋಣಿಯೊಳು ಮಾನಮುಂ ನೀಡಿದ್ದೆ ॥ ೨ ॥
ಇಂತು ಸುಖಸಂಪದವ-ನಿತ್ತ ಹರಿ ನಿನ್ನಡಿಗೆ ।
ಸಂತಸದಿ ಬಂದೆವ್ಯೆ ಪ್ರೇಮದಿಂ ಪಾಲಿಸೈ ॥ ೩ ॥

— ಸಮಾಪ್ತವು —